KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮೇ ೬, ೨೦೧೦ (ವೈಶಾಖ ೧೬, ಶಕ ವರ್ಷ ೧೯೩೨) | ಸಂಚಿಕೆ ೧೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ :** M/s Sterling Estates & Properties Ltd. **ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.**

**ಓದಲಾಗಿದೆ :** (1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/06/ಹೆಗ್ಗಡೆ/2009/995 ದಿನಾಂಕ: 22/25–02–2009 ಹಾಗೂ ಸಂಖ್ಯೆ: ಕೆಆರ್‌ಡಿಇ/06/ಹೆಗ್ಗದ್ದೆ/2009/3078 ದಿನಾಂಕ: 14/19–09–2009.

**(2) ದಿನಾಂಕ:** 23–10–2009 ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Sterling Estates & Properties Ltd. ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಬಾಳೆಹೊನ್ನೂರು ತಾಲ್ಲೂಕಿನ ಹೆಗ್ಗದ್ದೆ ಗ್ರಾಮದ ಬಳಿ ನರ್ಲೆ ಗುಂಡಿ ತೊರೆಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ: 23–10–2009ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Sterling Estates & Properties Ltd. ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಎನ್‌ಸಿಇ 2009, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2010**

M/s Sterling Estates & Properties Ltd. ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಬಾಳೆಹೊನ್ನೂರು ತಾಲ್ಲೂಕಿನ ಹೆಗ್ಗದ್ದೆ ಗ್ರಾಮದ ಗ್ರಾಮದ ಬಳಿ ನರ್ಲೆ ಗುಂಡಿ ತೊರೆಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude: $13^0$23'22". Longitude: $75^0$23'56" Power House Latitude: $13^0$23'27"E Longitude: $75^0$21'27") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು

ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು, ಒಡಂಬಡಿಕೆ ಮಾಡಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯ ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 516

**(ಎಸ್.ಜಿ. ಸಂಪತ್‌ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## ENERGY SECRETARIAT

Sub :- Transfer of commissioned 0.25 MW wind power capacity in favour of M/s G.N. Chandu (HUF)-reg.

Read :-
1. Government Order No.: DE 49 NCE 2006 dated: 20-04-2006.
2. Government Order No.: EN 98 NCE 2007 dated: 12-03-2007.
3. letter No.: KRED/08/Dr.G.N.C.F&APPL/2010/243 dated: 20/23-01-2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, approval has been accorded for implementation of 5 MW capacity wind power project at Gadag District to M/s Renewable Energy Consultancy.

In the Government Order read at (2) above, approval has been accorded for transfer of 0.25 MW wind power capacity in favour of M/s Fasteners and Allied Products (P) Ltd. From M/s Renewable Energy Consultancy at Sirund village, Gadag Taluk & District.

The Managing Director, Karnataka Renewable Energy Development Limited, Bangalore in his letter read at (3) above has recommended for transfer of commissioned 0.25 MW wind power capacity in favour of M/s G.N. Chandu (HUF) from M/s Fasteners and Allied Products (P) at Sirunj village, Gadag Taluk & District.

The proposal has been examined in detail and issued following Orders:-

**Government Order No. EN 28 NCE 2010, Bangalore, dated : 17-02-2010.**

Government accords approval for transfer of commissioned 0.25 MW wind power capacity in favour of M/s G.N. Chandu (HUF) from M/s Fasteners and Allied Porudcts (P) Ltd. At Sirunj village Gadag Taluk & District as detailed below and subject to the following conditions.

| Village Name | Taluk & District | Extent (A-G) | Sy. No. | Wind Turbine Generator's | Capacity Commissioned In MW |
|---|---|---|---|---|---|
| Sirunj | Gadag | 1 Acre | 17 | 1 x 250 KW | SHI-09 |

1. M/s G.N. Chandu (HUF) shall execute an agreement with Government within 45 (forty five) days from the date of issue of this Order.
2. PPA is assigned to HESCOM, HESCOM shall execute the PPA/Wheeling and Banking with M/s G.N. Chandu (HUF) within a period of one month from the date of agreement.

3. The Government has reserved the power to Cancel/modify this Order.

The other terms and conditions of the Government Order No. DE 49 NCE 2006 dated: 20-4-2006 shall IPSO FACTO applicable

**By Order and in the name of the Governor of Karnataka**

**(S.J. SAMPATH KUMAR)**
Under Secretary to Government
Energy Department

PR 517

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮವು ಶಿವಮೊಗ್ಗ ಮತ್ತು ಬೆಂಗಳೂರು ಸೆಕ್ಟರ್‌ನಡಿಯಲ್ಲಿ 2008ನೇ ಸಾಲಿಗೆ ಪಲ್ಪ್‌ವುಡ್ ನೆಡುತೋಪುಗಳ ನಿರ್ಮಾಣಕ್ಕಾಗಿ ತಯಾರಿಸಿದ ಪ್ರಾಯೋಜನೆಗಳಿಗೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ :** (1) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ಇವರ ಪತ್ರಗಳ ಸಂಖ್ಯೆ: ಕಅಅನಿನಿ/ಎ3/2008/ಕೆ.ಶಿ/2007–08 ದಿನಾಂಕ: 24–02–2009 ಹಾಗೂ 06–07–2009

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 24–02–2009 ಹಾಗೂ 06–07–2009ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ, ಬೆಂಗಳೂರು ಇವರು 2008ನೇ ಸಾಲಿನಲ್ಲಿ ಶಿವಮೊಗ್ಗ ಚಿಕ್ಕಮಗಳೂರು ಹಾಗೂ ಧಾರವಾಡ ವಿಭಾಗಗಳಲ್ಲಿ ಸೆಕ್ಟರಿನಡಿ 1200.00 ಹೆಕ್ಟೇರ್ ಕ್ಷೇತ್ರದಲ್ಲಿ ಕ್ಲೋನಲ್ ನೆಡುತೋಪುಗಳ ಪ್ರಾಯೋಜನೆಗೆ ರೂ. 455.05 ಲಕ್ಷಗಳಲ್ಲಿ ಹಾಗೂ ಬೆಂಗಳೂರು ಸೆಕ್ಟರಿನಡಿ 500.00 ಹೆಕ್ಟೇರ್ ಕ್ಷೇತ್ರದಲ್ಲಿ ರೂ. 159.28 ಲಕ್ಷಗಳಲ್ಲಿ ತಯಾರಿಸಿದ ಕ್ಲೋನಲ್ ನೆಡುತೋಪುಗಳ ಪ್ರಾಯೋಜನೆಗೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡಲು ಕೋರಿರುತ್ತಾರೆ. ಸದರಿ ಪ್ರಾಯೋಜನೆಗಳಿಗೆ ನಿಗಮದ 213ನೇ ಮಂಡಳಿಯ ಸಭೆಯಲ್ಲಿ ಚರ್ಚಿಸಿ ಅನುಮೋದನೆ ಪಡೆಯಲಾಗಿದೆಯೆಂದೂ ಹಾಗೂ ಇವುಗಳಿಗೆ ತಗಲುವ ವೆಚ್ಚವನ್ನು ನಿಗಮದ ಆಂತರಿಕ ಸಂಪನ್ಮೂಲಗಳಿಂದಲೇ ಭರಿಸಲಾಗುವುದೆಂದು ತಿಳಿಸಿ, ಪ್ರಸ್ತಾವನೆಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 54 ಎಫ್‌ಪಿಸಿ 2009, ಬೆಂಗಳೂರು, ದಿನಾಂಕ: 27ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ, ಬೆಂಗಳೂರು ಇವರು 2008ನೇ ಸಾಲಿನಲ್ಲಿ ಶಿವಮೊಗ್ಗ ಸೆಕ್ಟರಿನಡಿ ಶಿವಮೊಗ್ಗ ಚಿಕ್ಕಮಗಳೂರು ಹಾಗೂ ಧಾರವಾಡ ವಿಭಾಗಗಳಲ್ಲಿ 1200.00 ಹೆಕ್ಟೇರ್ ಕ್ಷೇತ್ರದಲ್ಲಿ ರೂ. 455.05 ಲಕ್ಷಗಳ (ರೂಪಾಯಿಗಳು ನಾಲ್ಕು ಕೋಟಿ ಐವತ್ತೈದು ಲಕ್ಷ ಐದು ಸಾವಿರಗಳು ಮಾತ್ರ) ಹಾಗೂ ಬೆಂಗಳೂರು ಸೆಕ್ಟರಿನಡಿ ಬೆಂಗಳೂರು ಹಾಗೂ ಕೋಲಾರ ವಿಭಾಗಗಳಲ್ಲಿ 500.00 ಹೆಕ್ಟೇರ್ ಕ್ಷೇತ್ರದಲ್ಲಿ ರೂ. 159.28 ಲಕ್ಷಗಳಲ್ಲಿ (ಒಂದು ಕೋಟಿ ಐವತ್ತೊಂಬತ್ತು ಲಕ್ಷದ ಇಪ್ಪತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ಕ್ಲೋನಲ್ ನೆಡುತೋಪುಗಳ ನಿರ್ಮಾಣ ಮಾಡಲು ತಯಾರಿಸಿದ ಎರಡೂ ಪ್ರಾಯೋಜನೆಗಳಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿದೆ.

ಸದರಿ ಪ್ರಾಯೋಜನೆಗಳಿಗೆ ತಗಲುವ ವೆಚ್ಚವನ್ನು ನಿಗಮದ ಆಂತರಿಕ ಸಂಪನ್ಮೂಲಗಳಿಂದಲೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 518

**(ಪಿ.ಆರ್. ಕಲಾವತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ENERGY SECRETARIAT

Sub :- Change of company name from M/s Millenium Synergy Pvt. Ltd. To M/s Millenium Synergy (Karnataka) Pvt. Ltd. – reg.

Read :- 1. Government Order No.: EN 199 NCE 2008 dated: 08-12-2008.

2. letters No.: KRED/07/SPV-GCPP/2009/3477 dated: 24/26-10-2009 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, approval has been accorded for implementation of 5.00 MW capacity of Grid Connected Solar Photovoltaic Power Plant to M/s Millenium Synergy Pvt. Ltd. At Gubbi Taluk, Tumkur District.

The Registrar of Companies, Karnataka, Bangalore has issued a certificate of incorporation vide CIN No.: U40109KA2009PTC050997 dated: 22-09-2009 to M/s Millenium Synergy (Karnataka) Private Limited.

In the letter read at (2) above, the Managing Director, Karnataka Renewable Energy Development Limited, Bangalore has sent proposal to Government for change of the company's name from M/s Millenium Synergy Pvt. Ltd. To M/s Millenium Synergy (Karnataka) Pvt. Ltd.

The proposal has been examined in detail and issued the following Orders:-

**Government Order No. EN 199 NCE 2008, Bangalore, dated : 22-02-2010.**

Government accords approval for the change of company's name from M/s Millenium Synergy Pvt. Ltd. To M/s Millenium Synergy (Karnataka) Pvt. Ltd.

The Government has received the power to Cancel/modify this Order.

The other terms and conditions of the Government Order No. EN 199 NCE 2008 dated: 8-12-2008 shall IPSO FACTO applicable

**By Order and in the name of the Governor of Karnataka**

**(S.J. SAMPATH KUMAR)**
Under Secretary to Government
Energy Department

PR 558

## ಇಂಧನ ಸಚಿವಾಲಯ

**ವಿಷಯ :** M/s PSR Hydro Energy Pvt. Ltd. **ಇವರಿಗೆ 18.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.**

**ಓದಲಾಗಿದೆ :** (1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/ಮಂಚಿಕೆರಿ/07/1986 ದಿನಾಂಕ: 22–05–2007/05–09–2007.

(**2**) **ದಿನಾಂಕ**: 13–02–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s PSR Hydro Energy Pvt. Ltd. ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಮಂಚಿಕೆರೆ ಗ್ರಾಮದ ಬಳಿ ಬೆಡ್ತಿ ನದಿಗೆ ಅಡ್ಡಲಾಗಿ 18.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ: 13–02–2009ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಲಾಗಿತ್ತು. M/s PSR Hydro Energy Pvt. Ltd. ಇವರಿಗೆ 18.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 323 ಎನ್‌ಸಿಇ 2007, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2010**

M/s PSR Hydro Energy Pvt. Ltd. ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಮಂಚಿಕೆರೆ ಗ್ರಾಮದ ಬಳಿ ಬೆಡ್ತಿ ನದಿಗೆ ಅಡ್ಡಲಾಗಿ 18.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude: $14^0$53'30" Weir Longitude: $74^0$47'30") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು, ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಿಟ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.
13. The developer should bear the risk of submersion in the event of KPCL project materializes.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 559

**(ಎಸ್.ಜೆ. ಸಂಪತ್‌ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## ENERGY SECRETARIAT

Sub :- Implementation of Pit-head Thermal Power Plant at Chhattisgarh in Joint Venture by Karnataka Power Corporation Limited(KPCL) and M/s.Larsen & Tubro Limited (M/s. L&T).

Read :- 1. Government Order No.: EN 80 PPC 2008 dated: 15-09-2008.
2. Letter No.: AIR7A, dated: 12-10-2009 of Managing Director, Karnataka Power Corporation Limited.

**Preamble:**

In the Government Order read at (1) above Government accorded approval for the following:-

a) Karnataka Power Corporation Limited is permitted to establish a Pit Head based Thermal Power Station in Chhattisgarh in two phases of 1200 Mega Watt each during the 11$^{th}$ and 12$^{th}$ plan and to take all necessary action to establish a Pit Head based Thermal Power Plant outside the State;

b) Karnataka Power Corporation Limited is permitted to prepare a Detailed Project Report (DPR) with firm cost estimates for establishing the economic and feasibility of a 1200 MW power project in Chattisgarh and appropriate project financing. The Detailed Project Report should be placed before the Board of Directors of Karnataka Power Corporation Limited for approval and submitted to Government before under taking the project;

Karnataka Power Corporation Limited has entered into Memorandum of Understanding with Chhattisgarh State Electricity Board/Government of Chhattisgarh on 08-09-2008 for impelementing a 1200 Mega Watt coal based Thermal Power Station.

In the letter vide letter read at (2) above the Managing Director, Karnataka Power Corporation Limited has reported that the proposed thermal power project at Chhattisgarh is planned to be implemented with super critical technology, as they are energy efficient and eco-friendly as compared to conventional thermal power plant up to 500 Mega Watt capacity units. Karnataka Power Corporation Limited floated an Expression of Interest (EOI) on 7-4-2009 for Joint Venture participation. Further he has informed that the offter of M/s Larsen & Tubro Limited opened on 19-06-2009 was found to be responsive and their proposal was examined by the Technical Committee and the Board of Directors. The Karnataka Power Corporation Limited Board had authorized the Managing Director to negotiate with M/s Larsen & Tubro Limited to secure better terms vide Board resolution dated 27-06-2009. The Board of Karnataka Power Corporation Limited in the meeting held on 26-09-2009 has approved the negotiations and recommended to enter into Memorandum of Understanding with M/s Larsen & Tubro Limited after the approval of the Government of Karnataka.

Karnataka Power Corporation Limited will be investing about 50% of the equity required for the project. Managing Director, Karnataka Power Corporation Limited has furnished a proposal for entering into MOU with M/s L & T Limited on the lines of the one entered into M/s BHEL for Edlapur and Yeramarus Project and requested approval of the Government to implement the Pit-head Thermal Power Plant at Chhattisgarh in Joint Venture with M/s Larsen & Tubro Limited on mutually agreed terms.

The proposal has been examined in detail. Hence the following Order is issued:-

**Government Order No. EN 137 PPC 2009, Bangalore, dated : 22-02-2010.**

Under the circumstances explained in preamble, approval is occorded for the following:

a) implementation of the 1600 + 5% Mega Watt pit head thermal power plant at Chhattisgarh pursuant to the Memorandum of Understanding with Government of Chhattisgarh dated 8-9-08 in Joint Venture mode;

b) implementation of project through a special purpose company promoted by Karnataka Power Corporation Limited and M/s Larsen & Tubro Limited, the successful bidder against the Expression of Interest called on 7-4-09;

c) Karnataka Power Corporation Limited to enter into Memorandum of Understanding with M/s Larsen & Tubro Limited as per mutually agreed terms to take the Joint Venture forward;

d) To enter into Joint venture Agreement with M/s Larsen & Tubro Limited inter alia providing for :

    i) incorporation of the company with equal representation in the Board of Directors with the positions of Chairman, MD, COO and CFO being shared equally amongst Karnataka Power Corporation Limited and M/s Larsen & Tubro Limited;

    ii) equity investment in Joint Venture Company to be incorporated by Karnataka Power Corporation Limited and M/s. Larsen & Tubro Limited on 50:50 proportion basis;

    iii) entrustment of EPC contract to M/s Larsen & Tubro Limited on bench marking basis with offers for Edlapur & Yeramarus, similar projects of National Thermal Power Corporation (NTPC) and Independent Power Producers (IPPs) in the country;

    iv) power Purchase Agreement (PPA) with Electricity Supply Companies (ESCOMs) for selling of balance power after metting the obligations of Karnataka Power Corporation Limited to Government of Chhattisgarh and Chhattisgarh State Electricity Board (CSEB) at 80% Plant Load Factor (PLF) with liberty to treat the unutilized allocation of Electrictiy Supply Companies (ESCOMs) power and power generated in excess of 80% as merchant power.

    v) Fix a lock in period of at least 5 years after the commercial operation date of the joint venture partner.

    vi) Incorporate in the MoU that the extent of power available to ESCOMs of Karnataka at any given point of time would be more than 50% PLF.

    vii) the issues of land acquisition. R & R, Railway Sliding, Water Piping corridor etc., must not be an obligation to the KPCL alone but on the joint venture company;

    viii) a price point criteria either as the cost of the project or price of power that will be supplied by this project should be fixed based on the pattern similar to the Ultra Mega Power Projects (UMPPs) of the Government of India.

**By Order and in the name of the Governor of Karnataka**
**(S.J. SAMPATH KUMAR)**

PR 560

Under Secretary to Government
Energy Department

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿನ ಅಧೀನ ಕಾರ್ಯದರ್ಶಿ ಹಾಗೂ ಉಪಕಾರ್ಯದರ್ಶಿ ಹುದ್ದೆಯನ್ನು ಉನ್ನತೀಕರಿಸುವ / ನಿಮ್ನೀಕರಿಸುವ ಬಗ್ಗೆ.

**ಓದಲಾಗಿದೆ :** ಅರೆ ಸರ್ಕಾರಿ ಪತ್ರ ಸಂಖ್ಯೆ: FD/Secy (B&R)/21/2010, ದಿನಾಂಕ 29–1–2010.

**ಪ್ರಸ್ತಾವನೆ :**

ಸರ್ಕಾರದ ಕಾರ್ಯದರ್ಶಿ (ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ ಅವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 29–1–2010ರ ಅರೆ ಸರ್ಕಾರಿ ಪತ್ರದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಅಧೀನ ಕಾರ್ಯದರ್ಶಿ(ಎಫ್.ಆರ್. ಮತ್ತು ಬಿ.ಸಿ.ಸಿ.) ಈ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ದಿನಾಂಕ: 31–3–2010ರವರೆಗೆ ತಾತ್ಕಾಲಿಕವಾಗಿ ಸರ್ಕಾರದ ಉಪ ಕಾರ್ಯದರ್ಶಿ (ಎಫ್.ಆರ್. ಮತ್ತು ಬಿ.ಸಿ.ಸಿ.) ಹುದ್ದೆಗೆ ಮೇಲ್ದರ್ಜೆಗೇರಿಸುವಂತೆ ಹಾಗೂ ಉಪಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ) ಈ ಹುದ್ದೆಯನ್ನು 31–3–2010ರ ನಂತರ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ) ಎಂದು ನಿಮ್ನೀಕರಿಸುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 95 ಸಅಸೇ 2010,**
**ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2010**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಅಧೀನ ಕಾರ್ಯದರ್ಶಿ (ಎಫ್.ಆರ್. ಮತ್ತು ಬಿ.ಸಿ.ಸಿ.) ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ದಿನಾಂಕ: 31–3–2010ರವರೆಗೆ ತಾತ್ಕಾಲಿಕವಾಗಿ ಸರ್ಕಾರದ ಉಪ ಕಾರ್ಯದರ್ಶಿ (ಎಫ್.ಆರ್. ಮತ್ತು ಬಿ.ಸಿ.ಸಿ.) ಎಂದು ಉನ್ನತೀಕರಿಸಲಾಗಿದೆ.

ಉಪಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ) ಈ ಹುದ್ದೆಯನ್ನು ದಿನಾಂಕ 1–4–2010 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ) ಎಂದು ನಿಮ್ನೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 418 ಸೇವೆಗಳು–3/2010 ದಿನಾಂಕ 23–2–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 561

**(ಎಂ.ಎಸ್. ಶಿವರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು–3)

## ಶಿಕ್ಷಣ ಸಚಿವಾಲಯ

**ವಿಷಯ :** 2009–10ನೇ ಸಾಲಿಗೆ ರಾಜ್ಯ ವಲಯ ಯೋಜನೇತರಡಿ ಸರ್ಕಾರಿ ಮುದ್ರಣಾಲಯ ಇಲಾಖೆಯ ಸಾಮಗ್ರಿ ಮತ್ತು ಸರಬರಾಜಿಗಾಗಿ ಅವಶ್ಯವಿರುವ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** ನಿರ್ದೇಶಕರು, ಸರ್ಕಾರಿ ಮುದ್ರಣಾಲಯ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎಸ್/ಲೆಕ್ಕ ಪತ್ರ–81/ ಪಿ(ಪಿ) 240/2009–10, ದಿನಾಂಕ 23–01–2010.

**ಪ್ರಸ್ತಾವನೆ :**

**1**. ಮೇಲೆ ಓದಲಾದ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ ಇಲಾಖೆ, ಬೆಂಗಳೂರುರವರ ಪತ್ರದಲ್ಲಿ 2009–10ನೇ ಸಾಲಿಗೆ ಲೆಕ್ಕ ಶೀರ್ಷಿಕೆ: 2058–00–101–0–01–221 (ಯೋಜನೇತರ) ಅಡಿ ಒದಗಿಸಲಾಗಿರುವ ಅನುದಾನ 1988.75 ಲಕ್ಷ ರೂಪಾಯಿಗಳಲ್ಲಿ 1938.75 ಲಕ್ಷ ರೂಪಾಯಿಗಳು ಮಾತ್ರ ವೆಚ್ಚವಾಗುವ ಸಂಭವವಿದ್ದು. ಅದರಲ್ಲಿ ಉಳಿತಾಯವಾಗುವ 50.00 ಲಕ್ಷ ರೂಪಾಯಿಗಳನ್ನು ಸರ್ಕಾರಿ ಮುದ್ರಣಾಲಯ ಇಲಾಖೆಯ ಸಾಮಗ್ರಿ ಮತ್ತು ಸರಬರಾಜಿಗಾಗಿ ಅವಶ್ಯವಿರುವ ಹೆಚ್ಚುವರಿ ಮೊತ್ತವನ್ನು ಲೆಕ್ಕ ಶೀರ್ಷಿಕೆ 2058–00–103–0–01–221 (ಯೋಜನೇತರ) ಅಡಿ ಮರು ಹಂಚಿಕೆ ಮಾಡಿ ಆದೇಶ ಹೊರಡಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

2. ಸದರಿ ಅನುದಾನ ಹಂಚಿಕೆ ಮಾಡಿ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 48 ಯೋಯೋಕ 2010, ಬೆಂಗಳೂರು ದಿನಾಂಕ 15–02–2010**
**(ಇಡಿ 24 ಸ್ಕೀಮರ (ಯುನಿಕ್) ದಿನಾಂಕ: 15ನೇ ಫೆಬ್ರವರಿ 2010**

3. ಸರ್ಕಾರಿ ಮುದ್ರಣಾಲಯ ಇಲಾಖೆಯ ಸಾಮಗ್ರಿ ಮತ್ತು ಸರಬರಾಜಿಗಾಗಿ ಹೆಚ್ಚುವರಿ ಅನುದಾನವನ್ನು 2009–10ನೇ ಸಾಲಿಗೆ ಲೆಕ್ಕ ಶೀರ್ಷಿಕೆ: 2058–00–101–0–01–221 (ಯೋಜನೇತರ) ರಡಿ ಒದಗಿಸಲಾಗಿರುವ ಅನುದಾನದಲ್ಲಿ ಉಳಿತಾಯವಾಗುವ ಮೊತ್ತದಿಂದ ರೂ. 50.00 ಲಕ್ಷ (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಲೆಕ್ಕ ಶೀರ್ಷಿಕೆ 2058–00–103–0–01–221 (ಯೋಜನೇತರ, ಅಡಿ ಮರು ಹಂಚಿಕೆ ಮಾಡಿ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ ಇಲಾಖೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲಾಗಿದೆ.

4) ಅನುಬಂಧದಲ್ಲಿ ಲಗತ್ತಿಸಿರುವ ಮರುಹೊಂದಾಣಿಕೆ ಪ್ರಪತ್ರ 22–ಎ ಅನ್ನು ಖಜಾನಾ ಇಲಾಖೆಯ ಎನ್.ಎಂ.ಸಿ. ಸೆಂಟರ್‌ಗೆ ಸಲ್ಲಿಸಿ ಮೊತ್ತವನ್ನು ಗಣಕದಲ್ಲಿ ಅಪ್ ಲೋಡ್ ಮಾಡಿಸಲು ಕ್ರಮ ವಹಿಸತಕ್ಕದ್ದು.

5) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ತಮ್ಮ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 282–ಐಎಫ್ (ಬಿ ಮತ್ತು ಎ) 2010. ದಿನಾಂಕ: 11–2–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 562

**(ಐ.ಎಫ್. ಮಾಗಿ)**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

**ಶಿಕ್ಷಣ ಸಚಿವಾಲಯ**

ಸಂಖ್ಯೆ: ಇಡಿ 7 ಯೋಯೋಕ 2009 ಬೆಂಗಳೂರು, ದಿನಾಂಕ: 16–02–2010

**ಸೇರ್ಪಡೆ ಆದೇಶ**

**ವಿಷಯ :** 2009–10ನೇ ಸಾಲಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದ ವಿಶೇಷ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಅನುಮೋದನೆ ನೀಡುವ ಬಗ್ಗೆ.

**ಉಲ್ಲೇಖ :** ದಿನಾಂಕ 13–08–2009, ಸಂಖ್ಯೆ: ಇಡಿ 7 ಯೋಯೋಕ 2009, [ಇಡಿ 102 ಸ್ಕೀಮರ (ಯುನಿಕ್) 2010, ದಿನಾಂಕ 13–08–2009]ರ ಸರ್ಕಾರಿ ಆದೇಶ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ,

ಉಲ್ಲೇಖಿತ ಸರ್ಕಾರಿ ಆದೇಶದ ಭಾಗದಲ್ಲಿನ ಷರತ್ತಿನ ಭಾಗದಲ್ಲಿ ಕೊನೆಯ ಷರತ್ತಿನ ನಂತರ ಈ ಕೆಳಕಂಡ ಅಂಶವನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

❖ ವಿದ್ಯಾರ್ಥಿನಿಯರಿಗೆ ಕೆ.ಜಿ.ಬಿ.ವಿ. ಶಾಲೆಗಳನ್ನು ತೆರೆಯಲು ಕಾರ್ಯಕ್ರಮದಡಿಯಲ್ಲಿ ಕೆ.ಜಿ.ಬಿ.ವಿ ವಸತಿ ಶಾಲೆಗಳನ್ನು 69.85 ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ರಾಜೀವ್ ಗಾಂಧಿ ರೂರಲ್ ಹೌಸಿಂಗ್, ಕಾರ್ಪೋರೇಷನ್ ಲಿ. ಮುಖಾಂತರ ನಿರ್ಮಾಣ ಮಾಡತಕ್ಕದ್ದು. ಸದರಿ ಕಾರ್ಯಕ್ರಮಕ್ಕೆ ಜಿಲ್ಲಾ ಪಂಚಾಯತ್‌ಗೆ ಬಿಡುಗಡೆ ಮಾಡಿದ್ದ ಅನುದಾನವನ್ನು ಹಿಂದೆ ಪಡೆದು ರಾಜೀವ್‌ಗಾಂಧಿ ರೂರಲ್ ಹೌಸಿಂಗ್ ಕಾರ್ಪೋರೇಷನ್ ಲಿ. ಬೆಂಗಳೂರು ರವರಿಗೆ ನೀಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 563

**(ಐ.ಎಫ್. ಮಾಗಿ)**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಐ.ವಿ. ತೇಜಸ್ವಿನಿ, ಉಪನ್ಯಾಸಕರು, ಶಿಶುವೈದ್ಯ ಶಾಸ್ತ್ರ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** (1) ಸಂಖ್ಯೆ: ವೈ.ಶಿ.ನಿ./ಎಸ್.ಆರ್‌ಓ(2)/7/2006–07 ದಿನಾಂಕ 30–05–2006.

(2) ಅಧಿಸೂಚನೆ ಸಂಖ್ಯೆ: ಅಕುಕ 347 ಎಂಎಂಸಿ 2005 ದಿನಾಂಕ 06–06–2006.

(3) ಸಂಖ್ಯೆ: ವಶ್ರೀಅ(3)/41/04–05 ದಿನಾಂಕ 06–06–2006.

(4) ನೋಟೀಸ್ ಸಂಖ್ಯೆ: ಆಕುಕ 347 ಎಂಎಂಸಿ 2004 ದಿನಾಂಕ 10–07–2006.

(5) ಅಧಿಸೂಚನೆ ಸಂಖ್ಯೆ: ಆಕುಕ 347 ಎಂಎಂಸಿ 2004 ದಿನಾಂಕ 22–07–2006

(6) ಡಾ: ತೇಜಸ್ವಿನಿ ಐ.ವಿ. ಉಪನ್ಯಾಸಕರು ಇವರ ಹೇಳಿಕೆ ದಿನಾಂಕ 19–07–2006

(7) ಸಂಖ್ಯೆ: ಎಸ್‌ಆರ್‌ಓ(2)/84/06–07 ದಿನಾಂಕ 27–11–2007, 24–04–2009 ಮತ್ತು 02–12–2009.

**ಪ್ರಸ್ತಾವನೆ :**

ನಿರ್ದೇಶಕರು ವೈದ್ಯಕೀಯ ಶಿಕ್ಷಣ ಇವರು (1)ರಲ್ಲಿ ಓದಲಾದ ಪತ್ರದಲ್ಲಿ ಡಾ: ಐ.ವಿ. ತೇಜಸ್ವಿನಿ ಇವರನ್ನು ಅನಧಿಕೃತ ಗೈರುಹಾಜರಿ ಬಗ್ಗೆ ಶಿಸ್ತು ಕ್ರಮ ಬಾಕಿ ಇರಿಸಿ, ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯಕ್ಕೆ ಅಥವಾ ಮೈಸೂರು ವೈದ್ಯಕೀಯ ಮಹಾವಿದ್ಯಾಲಯಕ್ಕೆ ನೇಮಿಸಲು ಕೋರಿದ್ದು, ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಡಾ: ಐ.ವಿ. ತೇಜಸ್ವಿನಿ ಇವರನ್ನು ಅನಧಿಕೃತ ಗೈರುಹಾಜರಿಯ ಬಗ್ಗೆ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇರಿಸಿ ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ಖಾಲಿ ಇರುವ ಶಿಶುವೈದ್ಯ ಶಾಸ್ತ್ರ ಉಪನ್ಯಾಸಕರ ಹುದ್ದೆಗೆ ನೇಮಿಸಲಾಗಿತ್ತು.

ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರು ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ಡಾ: ಐ.ವಿ. ತೇಜಸ್ವಿನಿ, ಉಪನ್ಯಾಸಕರು ಇವರ ಅನಧಿಕೃತ ಗೈರುಹಾಜರಿ ವಿರುದ್ಧ ದೋಷಾರೋಪಣ ಪಟ್ಟಿಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಿದ್ದು, ಅದನ್ನು ಪರಿಶೀಲಿಸಿ ಸರ್ಕಾರವು ಡಾ: ಐ.ವಿ. ತೇಜಸ್ವಿನಿ ಶಿಶುವೈದ್ಯ ಶಾಸ್ತ್ರ ಉಪನ್ಯಾಸಕರು ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ 11ನೇ ನಿಯಮದಡಿ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ನೋಟೀಸನ್ನು ದೋಷಾರೋಪಣೆಗಳೊಂದಿಗೆ ಅನುಬಂಧ 1 ರಿಂದ 4ರ ವರೆಗೆ ನೀಡಲಾಯಿತು.

ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಡಾ: ಐ.ವಿ. ತೇಜಸ್ವಿನಿ, ಉಪನ್ಯಾಸಕರು, ಶಿಶುವೈದ್ಯ ಶಾಸ್ತ್ರ, ಮೈಸೂರು ವೈದ್ಯಕೀಯ ಕಾಲೇಜು ಇವರನ್ನು ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ನ್ಯೂರಾಲಜಿ ವಿಭಾಗಕ್ಕೆ ಉಪನ್ಯಾಸಕರ ಹುದ್ದೆಗೆ ಅನ್ಯಪರ ಸೇವೆಯ ಮೇಲೆ ನೇಮಿಸಲಾಗಿತ್ತು.

ಡಾ: ಐ.ವಿ. ತೇಜಸ್ವಿನಿ, ಉಪನ್ಯಾಸಕರು, ಕ್ರಮಸಂಖ್ಯೆ (6)ರಲ್ಲಿ ಓದಲಾದ ರಕ್ಷಣಾ ಹೇಳಿಕೆಯಲ್ಲಿ ಅನಾರೋಗ್ಯದ ನಿಮಿತ್ತ ಗೈರುಹಾಜರಾಗಿರುವುದಾಗಿ ತಿಳಿಸಿ ಶಿಸ್ತುಕ್ರಮವನ್ನು ರದ್ದುಗೊಳಿಸಲು ಕೋರಿದ್ದರು.

ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರು ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಪತ್ರಗಳಲ್ಲಿ ವರದಿ ಮಾಡುತ್ತಾ ಡಾ: ಐ.ವಿ. ತೇಜಸ್ವಿನಿ, ಉಪನ್ಯಾಸಕರು ಇವರು ಬಾಂಡ್ ಅವಧಿಯಲ್ಲಿ ಇರುವುದಿಲ್ಲವೆಂದು, ಇವರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಇರುವುದಿಲ್ಲವೆಂದು ಸದರಿಯವರು ವಿದೇಶಕ್ಕೆ ತೆರಳುವ ಮುನ್ನ ನಿಗದಿತ ನಮೂನೆಯಲ್ಲಿ ಮಾಹಿತಿ ನೀಡಿದ್ದು ಇವರು ರಜೆ ವಿಸ್ತರಿಸಿರುವುದಿಲ್ಲವೆಂದು ಮತ್ತು ವಿದೇಶದಲ್ಲಿದ್ದಾಗ ರಾಜೀನಾಮೆಯನ್ನು ನೀಡಿರುವುದಿಲ್ಲವೆಂದು ತಿಳಿಸಿರುತ್ತಾರೆ. ಸದರಿಯವರು ದಿನಾಂಕ 14–04–2005 ರಿಂದ 17–06–2006ರ ವರೆಗಿನ ಅನಧಿಕೃತ ಗೈರುಹಾಜರಿ ಅವಧಿಯನ್ನು ಅಸಾಧಾರಣ ರಜೆ ಎಂದು ಮಂಜೂರು ಮಾಡಲು ಹಾಗೂ ಇವರು ದಿನಾಂಕ 01–12–2006 ರಿಂದ ಜಾರಿಗೆ ಬರುವಂತೆ ಸಲ್ಲಿಸಿರುವ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಡಾ: ಐ.ವಿ. ತೇಜಸ್ವಿನಿ, ಉಪನ್ಯಾಸಕರು, ಶಿಶುವೈದ್ಯ ಶಾಸ್ತ್ರ, ಮೈಸೂರು ವೈದ್ಯಕೀಯ ಕಾಲೇಜು ಇವರ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಟ್ಟು, ದಿನಾಂಕ 14–04–2005 ರಿಂದ 17–06–2006ರವರೆಗಿನ ಗೈರುಹಾಜರಿ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿ ಎಂದು ಪರಿಗಣಿಸಿ ದಿನಾಂಕ 01–12–2006 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 37 ಎಂಎಂಸಿ 2009, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2010**

ಡಾ: ಐ.ವಿ ತೇಜಸ್ವಿನಿ, ಉಪನ್ಯಾಸಕರು, ಶಿಶುವೈದ್ಯ ಶಾಸ್ತ್ರ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ (ಗೈರು ಹಾಜರಿಯ ನಂತರ ಸ್ಥಳನಿಯುಕ್ತಿ ನೀಡಿ ಕಾರ್ಯನಿರ್ವಹಿಸಿರುವುದು). ಇವರ ದಿನಾಂಕ 14–04–2005 ರಿಂದ 17–06–2006ರ ವರೆಗಿನ ಗೈರುಹಾಜರಿಯನ್ನು ಲೆಕ್ಕಕ್ಕಿಲ್ಲದ ಅವಧಿ ಎಂದು ಪರಿಗಣಿಸಲಾಗಿದೆ.

ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 252ರ ಪ್ರಕಾರ ಡಾ: ಐ.ವಿ. ತೇಜಸ್ವಿನಿ, ಉಪನ್ಯಾಸಕರು, ಇವರ ರಾಜೀನಾಮೆಯನ್ನು ದಿನಾಂಕ 01–12–2006 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 564

**(ವಿ. ಶ್ರೀರಾಮರೆಡ್ಡಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಸತ್ಯನಾರಾಯಣ, ಪ್ರಾಧ್ಯಾಪಕರು (ನಿವೃತ್ತ), ಶಸ್ತ್ರ ಚಿಕಿತ್ಸಾ ಶಾಸ್ತ್ರ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆ :**
1) ಸಂಖ್ಯೆ: ಡಿಪಿಜಿ/ಎಂಇ/03/05–06, ದಿನಾಂಕ: 16–05–2005.
2) ಕ್ರಮ ಸಂಖ್ಯೆ: ಆಕುಕ 68 ಎಂಎಂಸಿ 2005 ದಿನಾಂಕ 09–04–2006ರ ನೋಟೀಸ್.
3) ಡಾ: ಸತ್ಯನಾರಾಯಣ, ಪ್ರಾಧ್ಯಾಪಕರು ಇವರ ಹೇಳಿಕೆ ದಿನಾಂಕ 05–05–2006.
4) ಸರ್ಕಾರದ ಆದೇಶ ಸಂಖ್ಯೆ: ಆಕುಕ 68 ಎಂಎಂಸಿ 2005 ದಿನಾಂಕ 21–12–2006.
5) ಸರ್ಕಾರದ ಆದೇಶ ಸಂಖ್ಯೆ: ಆಕುಕ 68 ಎಂಎಂಸಿ 2005 ದಿನಾಂಕ 19–11–2007.
6) ಸರ್ಕಾರದ ಆದೇಶ ಸಂಖ್ಯೆ: ಆಕುಕ 68 ಎಂಎಂಸಿ 2005 ದಿನಾಂಕ 17–04–2009.
7) ವಿಚಾರಣಾ ವರದಿ ದಿನಾಂಕ 06–11–2009.

**ಪ್ರಸ್ತಾವನೆ :**

ಡಾ: ಸತ್ಯನಾರಾಯಣ, ಪ್ರಾಧ್ಯಾಪಕರು (ನಿವೃತ್ತ), ಶಸ್ತ್ರ ಚಿಕಿತ್ಸಾ ಶಾಸ್ತ್ರ ವಿಭಾಗ, ಸರ್ಕಾರಿ ವೈದ್ಯಕೀಯ ಮಹಾವಿದ್ಯಾಲಯ ಮೈಸೂರುರವರು ಕೆ.ಆರ್. ಆಸ್ಪತ್ರೆ ಮೈಸೂರು ಇಲ್ಲಿ ಶಸ್ತ್ರ ಚಿಕಿತ್ಸಾ 'ಡಿ' ಯೂನಿಟ್‌ನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ 17–03–2005 ರಂದು ರಾತ್ರಿ ಸುಮಾರು 15.58ರ ವೇಳೆಯಲ್ಲಿ ಶ್ರೀ ರಿಯಾಜ್ ಬಿನ್ ಲೇಜಾನಿ, ಇವರನ್ನು ಒಳರೋಗಿ ದಾಖಲಾತಿ ಸಂಖ್ಯೆ: 85197 ರಂತೆ ಯೂನಿಟ್‌ನಲ್ಲಿ ಚಿಕಿತ್ಸೆಗಾಗಿ ದಾಖಲಾತಿ ಮಾಡಿರುತ್ತಾರೆ. ಆದರೆ ಆದಿನ ಸದರಿ ರೋಗಿಯನ್ನು ಪರೀಕ್ಷಿಸದೆ ನಂತರ ದಿನಾಂಕ 18–03–2005 ರಂದು ಸದರಿ ರೋಗಿಯನ್ನು ಪರೀಕ್ಷಿಸಿ ತಮ್ಮ ವಿಸಿಟಂಗ್ ಕಾರ್ಡನ್ನು ರೋಗಿಯ ಬಂಧುಗಳಿಗೆ ನೀಡಿ ಅವರ ಖಾಸಗಿ ಕ್ಲಿನಿಕ್‌ನಲ್ಲಿ ಕಾಣಲು ತಿಳಿಸಿರುತ್ತಾರೆ. ಅಷ್ಟೇ ಅಲ್ಲದೆ ರೋಗಿಗೆ ಸಕಾಲದಲ್ಲಿ ನೀಡಬೇಕಾದ ಸಲಹೆ ಹಾಗೂ ಚಿಕಿತ್ಸೆಗಳನ್ನು ನೀಡದೇ ಶಸ್ತ್ರ ಚಿಕಿತ್ಸೆಯನ್ನು ನಡೆಸಲು ರೋಗಿಯ ಸಂಬಂಧಿಕರಿಂದ ರೂ. 10,000/–ಗಳ ಹಣವನ್ನು ನೀಡುವಂತೆ ಸೂಚಿಸಿರುತ್ತಾರೆ. ಈ ಮೂಲಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿ 1966ನೇ ನಿಯಮದ 3ನೇ ಉಪನಿಯಮ (i)(ii)(iii)ನ್ನು ಉಲ್ಲಂಘಿಸಿರುವುದಾಗಿ ಆರೋಪಿಸಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ದೋಷಾರೋಪಣೆ ಪಟ್ಟಿಯನ್ನು ಸಲ್ಲಿಸಿದ್ದರು.

ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನೋಟೀಸಿನಲ್ಲಿ 1957ರ ಕೆಸಿಎಸ್‌ಆರ್ (ಸಿಸಿಎ) ನಿಯಮಾವಳಿಯ 11ನೇ ನಿಯಮದಡಿ ಅವರ ವಿರುದ್ಧ ದೋಷಾರೋಪಣೆಯನ್ನು ಜಾರಿ ಮಾಡಿ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ತಿಳಿಯಪಡಿಸಲಾಗಿತ್ತು.

ಡಾ: ಸತ್ಯನಾರಾಯಣ, ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಮೈಸೂರು ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು ಇವರು ಕ್ರಮ ಸಂಖ್ಯೆ (3)ರಲ್ಲಿ ಓದಲಾದ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ಸದರಿಯವರ ವಿರುದ್ಧ ಮಾಡಲಾದ ದೋಷಾರೋಪಣೆಗಳನ್ನು ಅಲ್ಲಗಳೆದಿರುವರು. ಈ ಹಿನ್ನೆಲೆಯಲ್ಲಿ ದೋಷಾರೋಪಣೆಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಸಂಗೋಳ್ಳಿಯವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ಮುಖ್ಯ ಆಡಳಿತಾಧಿಕಾರಿಯನ್ನು

ಮಂಡನಾಧಿಕಾರಿಯಾಗಿ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಆದೇಶಗಳಲ್ಲಿ ನೇಮಕ ಮಾಡಲಾಯಿತು. ತದನಂತರ ಕ್ರಮ ಸಂಖ್ಯೆ (4) ಮತ್ತು (5)ರಲ್ಲಿ ಓದಲಾದ ಆದೇಶಗಳಲ್ಲಿ ವಿಚಾರಣಾಧಿಕಾರಿಗಳನ್ನು ಬದಲಾಯಿಸಿ ಕ್ರಮ ಸಂಖ್ಯೆ (6)ರಲ್ಲಿ ಸದರಿಯವರ ದೋಷಾರೋಪಣೆಗಳ ಬಗ್ಗೆ ವಿಚಾರಣೆ ನಡೆಸಲು ಶ್ರೀ ಕೆ. ರಾಜಶೇಖರ್, ಜಿಲ್ಲಾ ನ್ಯಾಯಾಧೀಶರು (ನಿವೃತ್ತ) ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು.

ವಿಚಾರಣಾಧಿಕಾರಿಯಾದ ಶ್ರೀ ಕೆ. ರಾಜಶೇಖರ್, ಜಿಲ್ಲಾ ನ್ಯಾಯಾಧೀಶರು (ನಿವೃತ್ತ)ರವರು ಮೇಲೆ (7)ರಲ್ಲಿ ಓದಲಾದ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ ಡಾ: ಸತ್ಯನಾರಾಯಣ, ಪ್ರಾಧ್ಯಾಪಕರು (ನಿವೃತ್ತ) ಡಾ: ಸತ್ಯನಾರಾಯಣ, ಪ್ರಾಧ್ಯಾಪಕರು ಇವರ ವಿರುದ್ಧ ಮಾಡಲಾದ ಆರೋಪಗಳಾವುವೂ ಸಾಬೀತಾಗಿಲ್ಲವೆಂದು ವರದಿ ಮಾಡಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಅಪಾದಿತ ಸರ್ಕಾರಿ ಅಧಿಕಾರಿಯಾದ ಡಾ: ಸತ್ಯನಾರಾಯಣ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ಶಾಸ್ತ್ರ, ಮೈಸೂರು ವೈದ್ಯಕೀಯ ಮಹಾವಿದ್ಯಾಲಯ (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಆರೋಪಗಳು ಸಾಬೀತಾಗಿಲ್ಲವೆಂಬ ವಿಚಾರಣಾಧಿಕಾರಿಯ ಕಂಡುಕೊಳ್ಳುವಿಕೆಯನ್ನು ಒಪ್ಪಿ, ಆರೋಪಗಳನ್ನು ಕೈಬಿಟ್ಟು ದೋಷಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 68 ಎಂಎಂಸಿ 2005, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2010**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರವರೆಗಿನ ನಿಯಮ 11 ಎ ರೊಂದಿಗೆ ಓದಿಕೊಂಡ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214ರ ಪ್ರಕಾರ ಆರೋಪಿ ಸರ್ಕಾರಿ ಅಧಿಕಾರಿಯಾದ ಡಾ: ಸತ್ಯನಾರಾಯಣ, ಪ್ರಾಧ್ಯಾಪಕರು (ನಿವೃತ್ತ) ಶಸ್ತ್ರ ಚಿಕಿತ್ಸಾ ಶಾಸ್ತ್ರ ವಿಭಾಗ, ಮೈಸೂರು ವೈದ್ಯಕೀಯ ಮಹಾವಿದ್ಯಾಲಯ, ಮೈಸೂರುರವರ ವಿರುದ್ಧದ ಆರೋಪಗಳನ್ನು ಕೈಬಿಟ್ಟು ದೋಷಮುಕ್ತರನ್ನಾಗಿ ಮಾಡಲಾಗಿದೆ.

ಡಾ: ಸತ್ಯನಾರಾಯಣ ಪ್ರಾಧ್ಯಾಪಕರು (ನಿವೃತ್ತ) ಶಸ್ತ್ರ ಚಿಕಿತ್ಸಾ ಶಾಸ್ತ್ರ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಇವರ ವಿರುದ್ಧ ಈ ಇಲಾಖಾ ವಿಚಾರಣೇ ಜರುಗಿಸದಿದ್ದಲ್ಲಿ ಯಾವ ಸವಲತ್ತುಗಳನ್ನು ಪಡೆಯಲು ಅರ್ಹರಿದ್ದರೋ ಆ ಸವಲತ್ತುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 565

**(ವಿ. ಶ್ರೀರಾಮರೆಡ್ಡಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕಿನ ಮೇಲುಕೋಟೆ ಗ್ರಾಮದ ಬೆಟ್ಟದ ಮೇಲಿರುವ ಶ್ರೀ ಯೋಗಾನರಸಿಂಹ ಸ್ವಾಮಿ ದೇವಾಲಯದ ರಾಜಗೋಪುರದ ದುರಸ್ತಿ ಅನುದಾನ ಮಂಜೂರಾತಿ.

**ಓದಲಾಗಿದೆ :**

1) ಕಂದಾಯ ಇಲಾಖೆಯ ಅ.ಸ. ಪತ್ರ ಸಂಖ್ಯೆ: ಕಂಇ 45 ಮುಜರಾಯಿ 2007 ದಿನಾಂಕ 13-12-2007
2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರ ಪತ್ರ ಸಂಖ್ಯೆ : ಡಿ.ಎ.ಎಂ:ಎಸಿಟಿ 6:3/2007-08/176, ದಿನಾಂಕ 19-12-2007.
3) ಸರ್ಕಾರಿ ಆದೇಶ ಸಂಖ್ಯೆ ಕಂಇ 45 ಮುಅಕಾ 2005, ದಿನಾಂಕ 23-07-2008.
4) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರ ಪತ್ರ ಸಂಖ್ಯೆ . ಡಿ.ಎ.ಎಂ:ಎಸಿಟಿ 6.105: 2008-09, ದಿನಾಂಕ 17-09-2008
5) ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 278 ಕೆಎಂಯು 2007, ದಿನಾಂಕ 21-03-2009
6) ನಿರ್ದೇಶಕರು, ಪ್ರಾ.ವ.ಸಂ. ಇಲಾಖೆ ಅವರ ಪತ್ರ ಸಂ: ಡಿ.ಎ.ಎಂ:ಎಸಿಟಿ 6.105: 2008-09, ದಿನಾಂಕ 26-11-2009.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಸರ್ಕಾರದ ಕಾರ್ಯದರ್ಶಿ (ವಿಪತ್ತು ನಿರ್ವಹಣೆ) ಕಂದಾಯ ಇಲಾಖೆ, ಇವರು ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕಿನ ಮೇಲುಕೋಟೆ ಗ್ರಾಮದ ಬೆಟ್ಟದ ಮೇಲಿರುವ ಶ್ರೀ ಯೋಗನರಸಿಂಹ ಸ್ವಾಮಿ ದೇವಾಲಯದ ರಾಜಗೋಪುರದ ದುರಸ್ತಿಗೆ ಸಂಬಂಧಿಸಿದಂತೆ ಸದರಿ ದೇವಸ್ಥಾನವು ಅತ್ಯಂತ ಪುರಾತನವಾಗಿದ್ದು ಶಿಥಿಲಾವಸ್ಥೆಯಲ್ಲಿದ್ದು, ಯಾವುದೇ ಸಮಯದಲ್ಲಿ ಬೀಳುವ ಸಂಭವವಿರುವುದರಿಂದ ಅತ್ಯಂತ ತುರ್ತಾಗಿ ದುರಸ್ತಿ/ಜೀರ್ಣೋದ್ಧಾರ ಮಾಡಬೇಕೆಂದು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 19–12–2007ರ ಪತ್ರದಲ್ಲಿ ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಮೈಸೂರು ಇವರು ಮೇಲುಕೋಟೆ ಗ್ರಾಮದ ಬೆಟ್ಟದ ಮೇಲಿರುವ ಶ್ರೀ ಯೋಗನರಸಿಂಹ ಸ್ವಾಮಿ ದೇವಾಲಯದ ಸಂರಕ್ಷಣಾ ಕಾರ್ಯವನ್ನು ಆರಂಭಿಸಲು ಹೆಚ್ಚುವರಿ ಅನುದಾನದ ರೂಪದಲ್ಲಿ ರೂ. 30.00 ಲಕ್ಷ ಅನುದಾನ ನೀಡಬೇಕೆಂದು ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ 23–07–2008ರ ಸರ್ಕಾರಿ ಆದೇಶದಲ್ಲಿ ರಾಜಗೋಪುರ ದುರಸ್ತಿ ಕಾರ್ಯಕ್ಕೆ ಪ್ರಾಚ್ಯವಸ್ತು ಇಲಾಖೆ ತಯಾರಿಸಿರುವ ರೂ. 27.00 ಲಕ್ಷಗಳ ಅಂದಾಜು ಪಟ್ಟಿ ನಕ್ಷೆಗೆ ಅನುಮತಿ ನೀಡಿ ಕಾಮಗಾರಿಗೆ ಸರ್ಕಾರದಿಂದ ಮಂಜೂರಾದ ರೂ. 10.00 ಲಕ್ಷಗಳನ್ನು ಭರಿಸಿಕೊಂಡು ಉಳಿದ ಮೊತ್ತದಲ್ಲಿ ರಾಜ್ಯ ಪ್ರಾಚ್ಯವಸ್ತು ಇಲಾಖಾ ವತಿಯಿಂದ ಹಾಗೂ ಧರ್ಮಸ್ಥಳ ಧರ್ಮೋತ್ಥಾನ ಟ್ರಸ್ಟ್‌ದಿಂದ ತಲಾ 8.10 ಲಕ್ಷಗಳನ್ನು ಭರಿಸಿಕೊಂಡು, ಉಳಿಕೆ ಮೊತ್ತವನ್ನು ದೇವಸ್ಥಾನದ ನಿಧಿಯಿಂದ ಭರಿಸಿಕೊಂಡು ಕಾಮಗಾರಿ ಪೂರ್ಣಗೊಳಿಸುವಂತೆ ಆದೇಶಿಸಿದೆ.

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಇವರು ಮೇಲೆ (4) ರಲ್ಲಿ ಓದಲಾದ ದಿನಾಂಕ 17–09–2008ರ ಪತ್ರದಲ್ಲಿ 2008–09ನೇ ಆರ್ಥಿಕ ಸಾಲಿನಲ್ಲಿ ಕ್ರಿಯಾಯೋಜನೆಯು ಈಗಾಗಲೇ ಸರ್ಕಾರದಿಂದ ಅನುಮೋದನೆ ಆಗಿರುವುದರಿಂದ ಮೇಲುಕೋಟೆ ಗ್ರಾಮದ ಬೆಟ್ಟದ ಮೇಲಿರುವ ಶ್ರೀ ಯೋಗನರಸಿಂಹ ಸ್ವಾಮಿ ದೇವಾಲಯದ ರಾಜಗೋಪುರ ದುರಸ್ತಿ ಕಾಮಗಾರಿಯು ಕ್ರಿಯಾಯೋಜನೆಯಲ್ಲಿ ಸೇರಿರುವುದಿಲ್ಲ ಆದರೆ ಕಂದಾಯ ಇಲಾಖೆಯು ತನ್ನ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಧರ್ಮಸ್ಥಳ ಧರ್ಮೋತ್ಥಾನ ಟ್ರಸ್ಟ್ ಹಾಗೂ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಸಹಭಾಗಿತ್ವದೊಂದಿಗೆ ಮ್ಯಾಚಿಂಗ್ ಗ್ರಾಂಟ್ ಮೂಲಕ ಈ ಕಾಮಗಾರಿಯನ್ನು ಕೈಗೊಳ್ಳಲು ಆದೇಶಿಸಿರುವುದರಿಂದ ಮಾನ್ಯ ಜಿಲ್ಲಾಧಿಕಾರಿಗಳ ಕೋರಿಕೆಯ ಮೇರೆಗೆ ಈ ಇಲಾಖೆಯ ವತಿಯಿಂದ ರೂ. 8.10 ಲಕ್ಷವನ್ನು ಅವರಲ್ಲಿ ಠೇವಣಿ ಇಡಬೇಕಾಗಿದೆ. ಈ ಮೊಬಲಗನ್ನು ಪ್ರಸಕ್ತ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) 059– ಇತರೆ ಖರ್ಚು ಅಡಿಯಲ್ಲಿನ ಸಂಭವನೀಯ ಉಳಿತಾಯದಲ್ಲಿ ಭರಿಸಬಹುದಾಗಿದೆಯೆಂದು ತಾಳೆ ಪಟ್ಟಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿ ಸದರಿ ಕಾಮಗಾರಿಯನ್ನು ಕೈಗೊಳ್ಳಲು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಇಲಾಖಾ ವತಿಯಿಂದ ರೂ. 8.10 ಲಕ್ಷವನ್ನು ಜಿಲ್ಲಾಧಿಕಾರಿಗಳು ಮಂಡ್ಯ ಜಿಲ್ಲೆ ಇವರಲ್ಲಿ ಠೇವಣಿ ಇಡಲು ಮಂಜೂರಾತಿ ಕೋರಿರುವುದನ್ನು ಪರಿಗಣಿಸಿ ಮೇಲೆ (5)ರಲ್ಲಿ ಓದಲಾದ ದಿನಾಂಕ : 21–03–2009ರ ಸರ್ಕಾರದ ಆದೇಶವನ್ನು ಹೊರಡಿಸಲಾಗಿದೆ.

ಮೇಲೆ (6)ರಲ್ಲಿ ಓದಲಾದ ದಿನಾಂಕ : 26–11–2009ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 278 ಕೆಎಂಯು 2007 ದಿನಾಂಕ : 21–03–2009ರಲ್ಲಿ ಹೊರಡಿಸಿದ ಆದೇಶವನ್ನು ಸಮಯಾಭಾವದಿಂದಾಗಿ ಅನುಷ್ಠಾನಗೊಳಿಸಲಾಗಿಲ್ಲವೆಂದು ತಿಳಿಸಿ ಪ್ರಸ್ತುತ ವರ್ಷದ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059– ಇತರೆ ಖರ್ಚುಗಳ ಅಡಿಯಲ್ಲಿ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ, ಇವರಿಗೆ ಪೇಯಿಸ್ ರಸೀಟ್ ಮೂಲಕ ಪಾವತಿಸಲು ರೂ. 8.10 ಲಕ್ಷ ಅನುದಾನವನ್ನು ಇಲಾಖೆಯವತಿಯಿಂದ ಠೇವಣಿ ಇಡಲು ಮಂಜೂರಾತಿ ಕೋರಿರುವರು.

ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕು ಮೇಲುಕೋಟೆ ಗ್ರಾಮದ ಬೆಟ್ಟದ ಮೇಲಿರುವ ಶ್ರೀ ಯೋಗಾನರಸಿಂಹ ಸ್ವಾಮಿ ದೇವಾಲಯದ ರಾಜಗೋಪುರ ದುರಸ್ತಿ ಕಾರ್ಯಕ್ಕೆ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖಾವತಿಯಿಂದ ರೂ. 8.10 ಲಕ್ಷಗಳ ಠೇವಣಿ ಇಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ. ಕಸಂವಾಪ್ರ 245 ಕೆಎಂಯು 2009, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ, 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕಿನ ಮೇಲುಕೋಟೆ ಗ್ರಾಮದ ಬೆಟ್ಟದ ಮೇಲಿರುವ ಶ್ರೀ ಯೋಗಾನರಸಿಂಹ ಸ್ವಾಮಿ ದೇವಾಲಯದ ರಾಜಗೋಪುರ ದುರಸ್ತಿ ಕಾರ್ಯವನ್ನು ರೂ. 27.00 ಲಕ್ಷ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಧರ್ಮಸ್ಥಳ ಧರ್ಮೋತ್ಥಾನ ಟ್ರಸ್ಟ್‌ವತಿಯಿಂದ ಶೇ. 40% ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯಿಂದ ಶೇ. 40% ಸಾರ್ವಜನಿಕರಿಂದ ಶೇ. 20.% (40:40:20) ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಮ್ಯಾಚಿಂಗ್ ಗ್ರಾಂಟ್ ಆದ ರೂ. 8.10 ಲಕ್ಷ (ರೂಪಾಯಿ ಎಂಟು ಲಕ್ಷದ ಹತ್ತು ಸಾವಿರಗಳು ಮಾತ್ರ) ವನ್ನು ಜಿಲ್ಲಾಧಿಕಾರಿಗಳು ಮಂಡ್ಯ ಜಿಲ್ಲೆ ಮಂಡ್ಯ ಇವರಲ್ಲಿ ಪೇಯಿಸ್ ರಸೀಟ್ ಮೂಲಕ ಠೇವಣಿ ಇಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು ಇವರಿಗೆ ಅನುಮತಿ ನೀಡಿದೆ. ಈ ಅನುದಾನವನ್ನು

2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059– ಇತರೆ ಖರ್ಚುಗಳ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಅವರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ : ಶಿಇ 229 ಐಎಫ್ (ಬಿಎ) 2010 ದಿನಾಂಕ 05–02–2010ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿಆರ್–566

## ಶಿಕ್ಷಣ ಸಚಿವಾಲಯ

**ವಿಷಯ :** ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ವಿಜ್ಞಾನ ಮತ್ತು ವಾಣಿಜ್ಯ ವಿಷಯಗಳ ವಿಭಾಗಗಳನ್ನು ತೆರೆಯುವ ಬಗ್ಗೆ

**ಓದಲಾಗಿದೆ :** ದಿನಾಂಕ 30–10–2009 ರಂದು ಆರ್ಥಿಕ ಇಲಾಖೆಯ ಆಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು

**ಪ್ರಸ್ತಾವನೆ :**

1. ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಓದಲಾದ ಆರ್ಥಿಕ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ : 30–10–2009 ರಂದು ನಡೆದ ಸಭೆಯ ನಡವಳಿಯಲ್ಲಿ ರಾಜ್ಯದಲ್ಲಿರುವ ಒಟ್ಟು 1200 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿದ್ದು, ಆ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಜಾಗತಿಕ ಸ್ಪರ್ಧಾ ಪ್ರಪಂಚವನ್ನು ಯಶಸ್ವಿಯಾಗಿ ಎದುರಿಸಲು ಅನುಕೂಲವಾಗುವಂತೆ ರಾಜ್ಯದಲ್ಲಿನ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಎಲ್ಲೆಲ್ಲಿ ವಿಜ್ಞಾನ ಮತ್ತು ವಾಣಿಜ್ಯ ವಿಷಯಗಳ ವಿಭಾಗಗಳಿಲ್ಲವೋ ಅಂತಹ ಕಡೆ ಆ ವಿಷಯಗಳನ್ನು ಪ್ರಾರಂಭಿಸುವ ಬಗ್ಗೆ ತೀರ್ಮಾನಿಸಲಾಗಿದೆ.
2. ಆರ್ಥಿಕ ಇಲಾಖೆಯು 2008–09 ನೇ ಸಾಲಿಗೆ 60 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ವಾಣಿಜ್ಯ ಮತ್ತು ವಿಜ್ಞಾನ ವಿಭಾಗಗಳನ್ನು ಪ್ರಾರಂಭಿಸಲು ಒಪ್ಪಿಗೆ ನೀಡಿದ್ದು, 2009–10ನೇ ಸಾಲಿಗೆ ಇನ್ನೂ 25 ಕಾಲೇಜುಗಳಲ್ಲಿ ವಿಜ್ಞಾನ ವಿಭಾಗಗಳನ್ನು ಪ್ರಾರಂಭಿಸಲು ಸಹ ಒಪ್ಪಿಗೆ ನೀಡಿದೆ.
3. ಮೇಲ್ಕಂಡ ಸಭೆಯ ತೀರ್ಮಾನದಂತೆ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ರವರು ಪ್ರಸ್ತಾವನೆ ಸಲ್ಲಿಸಿದ್ದು, ಅದರಲ್ಲಿ ರಾಜ್ಯದಲ್ಲಿ 50ಕ್ಕಿಂತ ಹೆಚ್ಚು ವಿದ್ಯಾರ್ಥಿಗಳಿರುವ ಕಲಾ ವಿಷಯ ಮಾತ್ರ ಇರುವ ಕಾಲೇಜುಗಳ ಸಂಖ್ಯೆ ಒಟ್ಟು 732 ಇದ್ದು, ಅದರಲ್ಲಿ 2009–10ನೇ ಸಾಲಿಗೆ ಒಟ್ಟು 60 ಕಾಲೇಜುಗಳಲ್ಲಿ ವಿಜ್ಞಾನ ವಿಷಯವನ್ನು ಪ್ರಾರಂಭಿಸಲು ಆರ್ಥಿಕ ಇಲಾಖೆಯು ತಾತ್ವಿಕ ಅನುಮೋದನೆ ನೀಡಿರುತ್ತದೆ. ಉಳಿದ 672 ಕಾಲೇಜುಗಳಲ್ಲಿ ವಿಜ್ಞಾನ ಅಥವಾ ವಾಣಿಜ್ಯ ವಿಭಾಗಗಳನ್ನು ಸೇರಿಸಲು ಉದ್ದೇಶಿಸಿದ್ದು ಅದರ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ವಿಷಯಗಳು | ಪ್ರಾರಂಭಿಸಬೇಕಾದ ಕಾಲೇಜುಗಳ ಸಂಖ್ಯೆ |
|---|---|---|
| 1 | ವಿಜ್ಞಾನ ವಿಭಾಗ ಪ್ರಾರಂಭಿಸಬೇಕಾದ ಕಾಲೇಜುಗಳು | 377 |
| 2 | ವಾಣಿಜ್ಯ ವಿಭಾಗ ಪ್ರಾರಂಭಿಸಬೇಕಾದ ಕಾಲೇಜುಗಳು | 1 |
| 3 | 50 ರಿಂದ 100 ಕ್ಕಿಂತ ಕಡಿಮೆ ವಿದ್ಯಾರ್ಥಿಗಳಿರುವ ಕಾಲೇಜುಗಳಿಗೆ ವಾಣಿಜ್ಯ ವಿಭಾಗ ನೀಡಬೇಕಾಗಿರುವ ಕಾಲೇಜುಗಳು | 209 |
| | ಒಟ್ಟು | 587 |

4. ಮೇಲ್ಕಂಡ ಕಾಲೇಜುಗಳಲ್ಲಿ ಹೊಸ ವಿಭಾಗಗಳನ್ನು ತೆರೆಯಲು ಅಗತ್ಯವಿರುವ ಹುದ್ದೆಗಳ ವಿವರಗಳು ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ವಿಷಯಗಳು | ಬೇಕಾಗುವ ಹುದ್ದೆಗಳ ಸಂಖ್ಯೆ |
|---|---|---|
| 1 | ವಿಜ್ಞಾನ ವಿಭಾಗಗಳನ್ನು ತೆರೆಯಲು | 1508 ಹುದ್ದೆಗಳು |
| 2 | ವಾಣಿಜ್ಯ ವಿಭಾಗಗಳನ್ನು ತೆರೆಯಲು | 210 ಹುದ್ದೆಗಳು |
| | ಒಟ್ಟು | 1718 ಹುದ್ದೆಗಳು |
| | ಈಗಾಗಲೇ ಅನುಮತಿ ನೀಡಿರುವ 60 ಕಾಲೇಜುಗಳಿಗೆ | 300 ಹುದ್ದೆಗಳು |
| | ಒಟ್ಟು ಬೇಕಾಗುವ ಹುದ್ದೆಗಳು | 2018 ಹುದ್ದೆಗಳು |

5. ಮೇಲ್ಕಂಡ ಪ್ರಸ್ತಾವನೆಗೆ ಸರ್ಕಾರದ ಆದೇಶವನ್ನು ನೀಡುವಂತೆ ಕೋರಿರುತ್ತಾರೆ.

6. ಮೇಲೆ ವಿವರಿಸಿರುವ ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ ಈ ಕೇಳಕಂಡಂತೆ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂ. ಇಡಿ 451 ಯೋಯೋಕ 2009, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ, 2010.**
**[ಇಡಿ: 21 : ಸ್ವೀಮರ[ಯುನಿಕ್] 2010, ದಿನಾಂಕ 20–02–2010]**

7 ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, 2010–11ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವಂತೆ 50ಕ್ಕಿಂತ ಹೆಚ್ಚು ವಿದ್ಯಾರ್ಥಿಗಳಿದ್ದು, ಏಕ ವಿಭಾಗ ಹೊಂದಿರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಮತ್ತೊಂದು ವಿಭಾಗ ಈ ಕೆಳಕಂಡಂತೆ ತೆರೆಯಲು ಮತ್ತು ಅಗತ್ಯವಿರುವ 2018 ಉಪನ್ಯಾಸಕರ ಹುದ್ದೆಗಳನ್ನು ಸೃಜಿಸಲು ಮತ್ತು ಪ್ರಸ್ತುತ ನಿಯಮಗಳನ್ವಯ ಭರ್ತಿಮಾಡಲು ಹಾಗೂ ವಿಜ್ಞಾನ ವಿಭಾಗವನ್ನು ಪ್ರಾರಂಭಿಸಲು 437 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ತಲಾ 3 ಪ್ರಯೋಗಾಲಯ ಕೊಠಡಿಗಳಂತೆ ಒಟ್ಟು 1311 ಪ್ರಯೋಗಾಲಯ ಕೊಠಡಿಗಳನ್ನು ಮುಂದಿನ ಮೂರು ವರ್ಷಗಳ ಅವಧಿಯಲ್ಲಿ ನಿರ್ಮಿಸಲು ಸರ್ಕಾರವು ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮೋದನೆ ನೀಡಿದೆ.

| ಕ್ರಮ ಸಂಖ್ಯೆ | ವಿಷಯಗಳು | ಪ್ರಾರಂಭಿಸಬೇಕಾದ ಕಾಲೇಜುಗಳ ಸಂಖ್ಯೆ |
|---|---|---|
| 1 | ವಿಜ್ಞಾನ ವಿಭಾಗ ಪ್ರಾರಂಭಿಸಬೇಕಾದ ಕಾಲೇಜುಗಳ | 377 |
| 2 | ವಾಣಿಜ್ಯ ವಿಭಾಗ ಪ್ರಾರಂಭಿಸಬೇಕಾದ ಕಾಲೇಜುಗಳು | 1 |
| 3 | 50 ರಿಂದ 100 ಕ್ಕಿಂತ ಕಡಿಮೆ ವಿದ್ಯಾರ್ಥಿಗಳಿರುವ ಕಾಲೇಜುಗಳಿಗೆ ವಾಣಿಜ್ಯ ವಿಭಾಗ ನೀಡಬೇಕಾಗಿರುವ ಕಾಲೇಜುಗಳು | 209 |
| | ಒಟ್ಟು | 587 |

8. ಹಾಲಿ ಪ್ರಾರಂಭಿಸಲಾಗುವ ಹೊಸ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಒದಗಿಸುವವರೆಗೆ ಯಾವುದೇ ಹೊಸ ಕಾಲೇಜುಗಳಿಗೆ ಪ್ರಸ್ತಾವನೆಯನ್ನು ಸಲ್ಲಿಸದಿರುವಂತೆ ಸೂಚಿಸಿದೆ.

9. ಕೊಠಡಿ ನಿರ್ಮಾಣಕ್ಕೆ ಸಂಬಂಧಿಸಿದಂತೆ, ಪ್ರಚಲಿತ ಕರ್ನಾಟಕ ಪಾರದರ್ಶಕ ಕಾಯ್ದೆಯ ಎಲ್ಲಾ ಅಂಶಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.

10. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ FD : 1678 Exp-08/09, dt. 24th Nov 2009 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಐ.ಎಫ್. ಮಾಗಿ)**
ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಆಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

ಪಿಆರ್–567

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಗದಗ ಜಿಲ್ಲೆ, ಮುಂಡರಗಿ ತಾಲ್ಲೂಕು ತಾಮ್ರಗುಂಡಿ ಸಣ್ಣ ನೀರಾವರಿ ಕೆರೆಯ ಒಡ್ಡು ಒಡದು ಹಾಳಾದ ರೈತರ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳುವ ಕುರಿತು.

**ಓದಲಾಗಿದೆ :** 1) ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ, ಇವರ ದಿ: 09–10–2009 ರಂದು ಅಂತ್ಯಗೊಂಡ ಪತ್ರ ಸಂಖ್ಯೆ : ಮುಇಂ/ಸನೀ/ಉವ/ಬಿಜಾ/ಭೂಸ್ವಾಪ್ರ/2009–10/5960.

2) ಸುತ್ತೋಲೆ ಸಂಖ್ಯೆ : ಕಂಇ 42 ಭೂಸ್ವಾಹಾ 2000 ದಿನಾಂಕ : 08–10–2001.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಗದಗ ಜಿಲ್ಲೆ, ಮುಂಡರಗಿ ತಾಲ್ಲೂಕು ತಾಮ್ರಗುಂಡಿ ಸಣ್ಣ ನೀರಾವರಿ ಕೆರೆಯ ಒಡ್ಡು ಒಡೆದು ಹಾಳಾದ ರೈತರ 6–37 ಎಕರೆ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳುವ ಹಾಗೂ ರೈತರಿಗೆ ಪರಿಹಾರಧನ ಪಾವತಿಸುವ ಕುರಿತು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕಂದಾಯ ಇಲಾಖೆಯು ಮೇಲೆ ಓದಲಾದ (2)ರ ಸುತ್ತೋಲೆಯಲ್ಲಿ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಿ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆ ಹೊರಡಿಸುವ ಪೂರ್ವದಲ್ಲಿ ಸಂಭವನೀಯ ಭೂಸ್ವಾಧೀನ ವೆಚ್ಚದ ಶೇ. 50 ರಷ್ಟನ್ನು ಮುಂಗಡ ಹಣವಾಗಿ ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಇಡಲು ಸೂಚಿಸಲಾಗಿದೆ.
ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ. ಸನೀಇ 95 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 23ನೇ ಫೆಬ್ರವರಿ, 2010.**

ಗದಗ ಜಿಲ್ಲೆ, ಮುಂಡರಗಿ ತಾಲ್ಲೂಕು ತಾಮ್ರಗುಂಡಿ ಸಣ್ಣ ನೀರಾವರಿ ಕೆರೆಯ ಒಡ್ಡು ಒಡೆದು ಹಾಳಾದ ರೈತರ 6–37 ಎಕರೆ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ರೂ. 1,64,123/– (ಒಂದು ಲಕ್ಷದ ಆರುವತ್ತಾನಾಲ್ಕು ಸಾವಿರದ ಒಂದು ನೂರ ಇಪ್ಪತ್ತಮೂರು ರೂಪಾಯಿಗಳು ಮಾತ್ರ) ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಇಡುವ ಸಲುವಾಗಿ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು – ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ್ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್–568

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 03–08–2009ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾಪ್ರ/ 2009–10/4573.

2) ಸರ್ಕಾರದ ಆದೇಶ ಸಂಖ್ಯೆ : ಸನೀಇ 226 ಭೂಸ್ವಾಪ್ರ 2005, ದಿನಾಂಕ 06–10–2006.

**ಪ್ರಸ್ತಾವನೆ :**

ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಸಣ್ಣ ನೀರಾವರಿ ಕೆರೆ ನಿಮಾರ್ಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಡಸೋಶಿ ಗ್ರಾಮದ ಜಮೀನುಗಳಿಗೆ ಹುಕ್ಕೇರಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ

ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದೆ ದಿನಾಂಕ 20–08–1992
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರಧನದ ಐತೀರ್ಪು ಘೋಷಿಸಿದ ದಿನಾಂಕ 28–03–1995.

ಭೂಸ್ವಾಧೀನಕ್ಕೊಳಪಟ್ಟ ಜಮೀನಿನ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಇನ್ನೂ ಹೆಚ್ಚಿನ ಪರಿಹಾರ ಧನಕ್ಕಾಗಿ ಹುಕ್ಕೇರಿ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ದಾಖಲಿಸಿದ್ದು, ನ್ಯಾಯಾಲಯವು ಪ್ರತಿ ಎಕರೆಗೆ ರೂ. 1,48,750/– ಗಳಿಗೆ ಪರಿಹಾರ ಧನವನ್ನು ಹೆಚ್ಚಿಸಿ ಇತರೆ ಸವಲತ್ತುಗಳೊಂದಿಗೆ ಪಾವತಿಸುವಂತೆ ಆದೇಶಿಸಿದೆ. ಈ ಆದೇಶದ ವಿರುದ್ಧ ಸರ್ಕಾರದ ಪರವಾಗಿ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಎಂ.ಎಫ್.ಎ. ಸಂಖ್ಯೆ : 3273/04ನ್ನು ದಾಖಲಿಸಿದ್ದು, ಉಚ್ಚ ನ್ಯಾಯಾಲಯದ ಮಧ್ಯಂತರ ತಡೆಯಾಜ್ಞೆಯನುಸಾರ ಸಿವಿಲ್ ನ್ಯಾಯಾಲಯವು ಹೆಚ್ಚಿಸಿದ ಪರಿಹಾರ ಮೊತ್ತದ ಶೇ. 50 ರಷ್ಟು ಅಂದರೆ ರೂ. 9,32,080ಗಳನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡಲು ಮೇಲೆ (2)ರಲ್ಲಿ ಓದಲಾದ ದಿನಾಂಕ 06–10–06 ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಿದೆ.

ಪ್ರಸ್ತುತ ಉಚ್ಚ ನ್ಯಾಯಾಲಯದಲ್ಲಿ ಎಂ.ಎಫ್.ಎ. ವಜಾಗೊಂಡಿದ್ದು ಸದರಿ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ದಿನಾಂಕ 29–01–2009ರ ಪತ್ರ ಸಂಖ್ಯೆ: ಲಾ 51 ಎಲ್‌ಬಿಎಸ್ 2009ರಲ್ಲಿ ಅಭಿಪ್ರಾಯ ನೀಡಿದೆ. ಈ ಹಿನ್ನೆಲೆಯಲ್ಲಿ ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಇನ್ನುಳಿದ ಶೇ. 50 ರಷ್ಟು ಹಣವನ್ನು ಶೇ. 15ರ ಬಡ್ಡಿಯೊಂದಿಗೆ ಪಾವತಿಸಬೇಕಾಗಿದೆ. ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ವಿವರ ಕೆಳಕಂಡಂತಿದೆ.

| ಕ್ರ ಸಂ | ಎಲ್‌ಎಸಿ ಸಂ | ಎಂಎಫ್‌ಎ ಸಂಖ್ಯೆ | ನಿಡಸೋಶಿ ಗ್ರಾಮ ಸ. ನಂ, | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ. ಗಳಲ್ಲಿ |
|---|---|---|---|---|---|
| 1 | 202/97 | 3273/04 | 223/1 | 3–31 | 11,43,743–00 |

ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ. ಸನೀಇ 129 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 23ನೇ ಫೆಬ್ರವರಿ, 2010.**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ನಿಡಸೋಶಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 11,43,743–00 ಗಳನ್ನು (ಹನ್ನೊಂದು ಲಕ್ಷದ ನಲವತ್ತ್ಮೂರು ಸಾವಿರದ ಏಳುನೂರು ನಲವತ್ತ್ಮೂರು ರೂ. ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು – ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್–569

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕು ಸೈದಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸೈದಾಪುರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 27-06-2009ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾಪ್ರ/ 2008-09/3755

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕು ಸೈದಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸೈದಾಪುರ ಗ್ರಾಮ ಸರ್ವೆ ನಂಬರ್‌ಗಳಿಗೆ ಸೇರಿದ ಜಮೀನುಗಳಿಗೆ ಬಸವಕಲ್ಯಾಣದ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ)ವು ಎಲ್.ಎಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದೆ ದಿನಾಂಕ 30-12-1999
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರಧನದ ಐತೀರ್ಪು ಘೋಷಿಸಿದ ದಿನಾಂಕ 30-09-2002

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬಸವಕಲ್ಯಾಣ ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸದರಿ ತೀರ್ಪಿನಲ್ಲಿ ನ್ಯಾಯಾಲಯವು ಪ್ರತಿ ಎಕರೆಗೆ ಪರಿಹಾರ ಧನವನ್ನು ರೂ. 1,00,000/- ಗಳಿಗೆ ಹೆಚ್ಚಿಸಿ ಸಾಮಾನ್ಯ ತೀರ್ಪನ್ನು ನೀಡಿರುತ್ತಾರೆ. ಇನ್ನೂ ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಮಾಲೀಕರು ಉಚ್ಚ ನ್ಯಾಯಾಲಯದ ಮೇಲ್ಮನವಿ ಎಂಎಫ್ಎ ಪ್ರಕರಣಗಳನ್ನು ದಾಖಲಿಸಿದ್ದು, ನ್ಯಾಯಾಲಯವು ಪ್ರತಿ ಎಕರೆಗೆ ರೂ. 1,87,600/- ಗಳ ಭೂಮೌಲ್ಯ ನಿಗದಿಪಡಿಸಿದೆ. ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ : ಲಾ 1266 ಎಲ್‌ಎಸ್‌ಪಿ 2008 ದಿನಾಂಕ 30-08-2008 ಲಾ 1438 ಎಲ್‌ಎಸ್‌ಪಿ 2008, ದಿನಾಂಕ 27-08-09 ಹಾಗೂ ಲಾ 1267 ಎಲ್‌ಎಸ್‌ಪಿ 2008, ದಿನಾಂಕ 30-08-2008ರಲ್ಲಿ ಅಭಿಪ್ರಾಯ ನೀಡಿದೆ.

ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ ಸಂ | ಎಲ್‌ಎಸಿ ಸಂಖ್ಯೆ | ಎಂಎಫ್ಎ ಸಂಖ್ಯೆ | ಸೈದಾಪುರ ಗ್ರಾಮದ ಸರ್ವೆ ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ. ಗಳಲ್ಲಿ) |
|---|---|---|---|---|---|
| 1 | 13/05 | 7295/07 | 9/2 | 2-24 | 946711 |
| 2 | 23/05 | 7296/07 | 10/1ಅ, 1ಬ, 1ಆ, 2ಆ | 2-00 | 728467 |
| 3 | 24/05 | 7297/07 | 8/2 | 3-30 | 1364914 |
| | | | ಒಟ್ಟು | | 3040092 |

ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಸನೀಇ 112 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 23ನೇ ಫೆಬ್ರವರಿ, 2010.**

ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕು ಸೈದಾಪುರ ಸಣ್ಣ ನೀರಾವರಿ ಕೆರೆ ನಿಮಾರ್ಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸೈದಾಪುರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 30,40,092-00 ಗಳನ್ನು (ಮೂವತ್ತು ಲಕ್ಷದ ನಲವತ್ತು ಸಾವಿರದ ತೊಂಭತ್ತೆರಡು ರೂ. ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೊಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ : ಎಫ್ ಡಿ. 1 ಟಿಎಫ್‌ಡಿ 2008 ದಿನಾಂಕ 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್–570

## ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ : 2008–09 ನೇ ಸಾಲಿನ ಮೈಸೂರು ದಸರಾ ಉತ್ಸವದ ಸಂದರ್ಭದಲ್ಲಿ ಪುರಾತತ್ವ ವಸ್ತು ಪ್ರದರ್ಶನ ಕಾರ್ಯಕ್ರಮವನ್ನು ಏರ್ಪಡಿಸಿದ್ದಕ್ಕೆ ಹೆಚ್ಚುವರಿ ಅನುದಾನ ಕುರಿತು.**

**ಓದಲಾಗಿದೆ** :

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ ಡಿಎಎಂ : ಎಸಿಟಿ. 1 : 24 : 2008–09, ದಿನಾಂಕ : 27–2–2008 ಮತ್ತು 10–9–2009.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು 2008–09 ನೇ ಸಾಲಿನ ಮೈಸೂರು ದಸರಾ ಉತ್ಸವದ ಸಂದರ್ಭದಲ್ಲಿ ಪುರಾತತ್ವ ವಸ್ತು ಪ್ರದರ್ಶನ ಕಾರ್ಯಕ್ರಮವನ್ನು ಏರ್ಪಡಿಸಿದ್ದು, ವಸ್ತು ಪ್ರದರ್ಶನದ ಅವಧಿಯಲ್ಲಿ 3 ತಿಂಗಳಿಗೆ ಬಾಡಿಗೆಗೆ ಲೈಟ್ ಪಡೆದರೆ ರೂ. 68,000/– ಗಳು ಖರ್ಚಾಗುವುದೆಂದು, ಅದನ್ನೇ ಶಾಶ್ವತ ಲೈಟ್ ಅಳವಡಿಸಿದರೆ ರೂ. 98,000/– ಗಳು ಖರ್ಚಾಗುವುದೆಂದು ತಿಳಿದು ಶಾಶ್ವತ ಲೈಟ್ ಅಳವಡಿಸಿ, ಇದಕ್ಕಾಗಿ ಹೆಚ್ಚುವರಿಯಾಗಿ ವೆಚ್ಚ ಮಾಡಿರುವ ರೂ. 96,690/– ಗಳನ್ನು 2008–09ನೇ ಸಾಲಿನ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) –059 ಇತರೆ ಖರ್ಚುಗಳ ಅಡಿಯಲ್ಲಿನ ಸಂಭವನೀಯ ಉಳಿತಾಯದಲ್ಲಿ ಭರಿಸಿರುವುದರಿಂದ ಈ ಸಂಬಂಧ ಘಟನೋತ್ತರ ಮಂಜೂರಾತಿ ನೀಡಲು ಕೋರಿರುತ್ತಾರೆ.

2008–09ನೇ ಸಾಲಿನ ಮೈಸೂರು ದಸರಾ ಉತ್ಸವದ ಸಂದರ್ಭದಲ್ಲಿ ಪುರಾತತ್ವ ವಸ್ತು ಪ್ರದರ್ಶನ ಕಾರ್ಯಕ್ರಮವನ್ನು ಏರ್ಪಡಿಸಿದ್ದು, ವಸ್ತು ಪ್ರದರ್ಶನದ ಅವಧಿಯಲ್ಲಿ ಶಾಶ್ವತವಾಗಿ ಲೈಟ್ ಅಳವಡಿಸಿರುವುದಕ್ಕೆ ತಗುಲಿದ ವೆಚ್ಚ ಒಟ್ಟು ರೂ. 96,690/– ಗಳಿಗೆ ಘಟನೋತ್ತರ ಮಂಜೂರಾತಿ ನೀಡಲು ಸರ್ಕಾರವು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶ :–

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 142 ಕೆಎಂಯು 2009 ಬೆಂಗಳೂರು, ದಿನಾಂಕ: 23–02–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2008–09 ನೇ ಸಾಲಿನ ಮೈಸೂರು ದಸರಾ ಉತ್ಸವದ ಸಂದರ್ಭದಲ್ಲಿ ಪುರಾತತ್ವ ವಸ್ತು ಪ್ರದರ್ಶನ ಕಾರ್ಯಕ್ರಮವನ್ನು ಏರ್ಪಡಿಸಿದ್ದು. ವಸ್ತು ಪ್ರದರ್ಶನ ಅವಧಿಯಲ್ಲಿ ಶಾಶ್ವತ ಲೈಟ್ ಅಳವಡಿಸಿರುವುದರಿಂದ, ಇದಕ್ಕೆ ತಗುಲಿದ ಹೆಚ್ಚುವರಿ ಅನುದಾನ ರೂ.96,690/– (ರೂಪಾಯಿ ತೊಂಭತ್ತಾರು ಸಾವಿರದ ಆರುನೂರ ತೊಂಭತ್ತು ಮಾತ್ರ) ಗಳನ್ನು 2008–09ನೇ ಸಾಲಿನ ಲೆಕ್ಕ ಶೀರ್ಷಿಕೆ 2205–00–103–0–01 (ಯೋಜನೆ)–059 ಇತರೆ ಖರ್ಚುಗಳ ಅಡಿಯಲ್ಲಿನ ಸಂಭವನೀಯ ಉಳಿತಾಯದಲ್ಲಿ ಭರಿಸಿರುವುದಕ್ಕೆ ಘಟನೋತ್ತರ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ದಿನಾಂಕ 9–02–2010ರ ಟಿಪ್ಪಣಿ ಸಂಖ್ಯೆ ಶಿಇ 176 ಐಎಫ್ (ಬಿ ಮತ್ತು ಎ) 2010 ರಲ್ಲಿ ಸಹಮತಿ ಪಡೆದು ಮತ್ತು ಆರ್ಥಿಕ ಇಲಾಖೆಯ ಆದೇಶ ಸಂ : ಎಫ್‌ಡಿ 1 ಟಿ.ಎಫ್.ಪಿ. 96 ದಿನಾಂಕ: 10–7–96ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ.ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 636

**ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ : ನಿಜಾಮ್ ಸರ್ಕಾರ ಪ್ರಕಟಿಸಿರುವ ಜಿಲ್ಲಾ ಗ್ಯಾಸೆಟಿಯರ್ ಮತ್ತು The Imperial Gazetteers of India provincial series Hyderabad State-1909 Scanning ಮತ್ತು ಪುನರ್ ಮುದ್ರಣ– ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.**

**ಓದಲಾಗಿದೆ** : ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಬೆಂಗಳೂರು ಇವರ ಪತ್ರ ಸಂ: ಕಗ್ಯಾಇ/ನಿಜಾಮ್/2009–10/493, ದಿನಾಂಕ : 1–12–2009

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 01–12–2009 ರ ಪತ್ರದಲ್ಲಿ ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಬೆಂಗಳೂರು ಇವರು 2009–10ನೇ ಸಾಲಿನ ಆಯವ್ಯಯದಲ್ಲಿ ಯೋಜನಾ ಲೆಕ್ಕಶೀರ್ಷಿಕೆಯಡಿ ರೂ.20.00 ಲಕ್ಷಗಳ ಅನುದಾನ ಮಂಜೂರು ಮಾಡಿದ್ದು, ನಿಜಾಮ್‌ರ ಸರ್ಕಾರವು ಪ್ರಕಟಿಸಿರುವ ಹೈದರಾಬಾದ್ ಜಿಲ್ಲಾ ಗ್ಯಾಸೆಟಿಯರ್ಸ್ ಸರಣಿಯಲ್ಲಿ ಕರ್ನಾಟಕದ ಜಿಲ್ಲೆಗಳಾದ ಗುಲ್ಬರ್ಗಾ, ಬೀದರ್ ಮತ್ತು ರಾಯಚೂರು ಗ್ಯಾಸೆಟಿಯರ್ ಸಂಪುಟಗಳನ್ನು 1909 ರಲ್ಲಿ ಅಂದಿನ ಭಾರತ ಸರ್ಕಾರದಿಂದ ಪ್ರಕಟಗೊಂಡು The Imperial Gazetteers of India provincial series Hyderabad State-1909-Scanning ಮತ್ತು ಪುನರ್ ಮುದ್ರಣ ಕಾರ್ಯವನ್ನು 2009–10ನೇ ಸಾಲಿನಲ್ಲಿ ಮಾಡಲು ಉದ್ದೇಶಿಸಿದ್ದು, ಕರ್ನಾಟಕದ 3 ಜಿಲ್ಲೆಗಳಿಗೆ ಸಂಬಂಧಿಸಿದಂತೆ ಒಟ್ಟು 250 ಪುಟಗಳನ್ನು ನೆರಳಚ್ಚುಗೊಳಿಸಿ, ನವದೆಹಲಿಯ ರಾಷ್ಟ್ರೀಯ ಪತ್ರಾಗಾರ ಇಲಾಖೆಯಿಂದ ಪಡೆದುಕೊಳ್ಳಲಾಗಿದ್ದು, ಇವುಗಳ ಸ್ಕ್ಯಾನಿಂಗ್ ಮತ್ತು ಪುನರ್ ಮುದ್ರಣಕ್ಕೆ ತಗಲುವ ಅಂದಾಜು ವೆಚ್ಚ ರೂ. 9.50 ಲಕ್ಷಗಳನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 3454–02–110–0–01 ರಡಿ ಭರಿಸಲು ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ ಹಾಗೂ ವೆಚ್ಚದ ಚೆಕ್ ಲಿಸ್ಟ್‌ನ್ನು ಸಹ ಲಗತ್ತಿಸಿರುತ್ತಾರೆ.

ನಿಜಾಮ್ ಸರ್ಕಾರ ಪ್ರಕಟಿಸಿರುವ ಜಿಲ್ಲಾ ಗ್ಯಾಸೆಟಿಯರ್ ಮತ್ತು The Imperial Gazetteers of India provincial series Hyderabad State-1909-Scanning ಮತ್ತು ಪುನರ್ ಮುದ್ರಣ ಕಾರ್ಯಕ್ಕೆ ರೂ. 9.50 ಲಕ್ಷಗಳಿಗೆ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 19 ಕರಾಗೆ 2009, ಬೆಂಗಳೂರು, ದಿನಾಂಕ: 23–02–2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ನಿಜಾಮ್ ಸರ್ಕಾರ ಪ್ರಕಟಿಸಿರುವ ಜಿಲ್ಲಾ ಗ್ಯಾಸೆಟಿಯರ್ ಮತ್ತು The Imperial Gazetteers of India provincial series Hyderabad State-1909-Scanning ಮತ್ತು ಪುನರ್ ಮುದ್ರಣ ಕಾರ್ಯಕ್ಕೆ ರೂ. 9.50 ಲಕ್ಷ (ರೂಪಾಯಿ ಒಂಭತ್ತು ಲಕ್ಷ ಐವತ್ತು ಸಾವಿರ ಮಾತ್ರ) ಗಳನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 3454–02–110–0–01 (ಯೋಜನೆ) ಅಡಿಯಲ್ಲಿ ಭರಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಈ ಆದೇಶವನ್ನು ದಿನಾಂಕ : 24–12–2009 ರ ಟಿಪ್ಪಣಿ ಸಂ : ಶಿಇ 3228 ಐಎಫ್ (ಬಿ & ಎ) 2009 ರಲ್ಲಿ ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ನೀಡಿರುವ ಸಹಮತಿಯ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ದಿನಾಂಕ : 16–05–2008 ರ ಆದೇಶ ಸಂ : ಎಫ್‌ಡಿ 1 ಟಿ.ಎಫ್.ಪಿ 08 ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 637

**(ಎಂ.ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ಅಧೀನ ಕಛೇರಿಗಳಾದ ಸರ್ಕಾರಿ ವಸ್ತು ಸಂಗ್ರಹಾಲಯಗಳಿಗೆ ಭದ್ರತಾ ಸಿಬ್ಬಂದಿಯನ್ನು ಹಾಗೂ ಗೃಹರಕ್ಷಕ ದಳದವರನ್ನು ನೇಮಕ ಮಾಡಿಕೊಳ್ಳಲು ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 88 ಸ್ವೀಮರ 2008, ದಿನಾಂಕ : 30–12–2008. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರ ಪತ್ರ ಸಂಖ್ಯೆ : ಡಿಎಎಂ : ಇಎಸ್‌ಟಿ.3/ಸ.ವ.ಭ/2009–10/7, ದಿನಾಂಕ : 20–05–2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 30–12–2008 ರ ಸರ್ಕಾರಿ ಆದೇಶದಲ್ಲಿ 1) ಪುರಾತತ್ವ ಸಂರಕ್ಷಣಾ ಇಂಜಿನಿಯರ್–2 ಹುದ್ದೆಗಳು 2) ಸಹಾಯಕ ಕ್ಯೂರೇಟರ್–2 ಹುದ್ದೆಗಳು 3) ಕಚೇರಿ ಅಧೀಕ್ಷಕರು–2 ಹುದ್ದೆಗಳು 4) ಕಂಪ್ಯೂಟರ್ ಆಪರೇಟರ್–2 ಹುದ್ದೆಗಳು 5) ಗ್ರೂಪ್–ಡಿ ನೌಕರರು–50 ಹುದ್ದೆಗಳು ಅಲ್ಲದೇ ಒಂದು ಹೊಸ ಟಾಟಾ ಸುಮೋ ವಾಹನ ಖರೀದಿ ಹಾಗೂ 2 ಹೊಸ ದೂರವಾಣಿ ಸಂಪರ್ಕ ಹೊಂದಲು ಅನುಮತಿಸಿ ಆದೇಶಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ 20–05–2009ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿ, ಇಲಾಖೆಯಲ್ಲಿ ಖಾಲಿ ಇರುವ 28 ಗ್ರೂಪ್–ಡಿ ಹುದ್ದೆಗಳ ಜೊತೆಗೆ 2009–10ನೇ ಸಾಲಿಗೆ ಹೊಸ ಘಟಕಗಳಡಿಯಲ್ಲಿ ಮಂಜೂರಾದ 50 ಗ್ರೂಪ್–ಡಿ ಹುದ್ದೆಗಳನ್ನೊಳಗೊಂಡಂತೆ ಒಟ್ಟು 78 ಹುದ್ದೆಗಳ ಎದುರಿಗೆ ಭದ್ರತಾ ಸಿಬ್ಬಂದಿಗಳನ್ನು ಬಾಹ್ಯ ಮೂಲದಿಂದ ನೇಮಕ ಮಾಡಿಕೊಳ್ಳಲು ಹಾಗೂ 35 ಮಂದಿ ಗೃಹರಕ್ಷಕ ದಳದ ಸಿಬ್ಬಂದಿಯನ್ನು ಮಹಾ ನಿರ್ದೇಶಕರು ಮತ್ತು ಗೃಹ ರಕ್ಷಕ ದಳದ ಮಹಾದೇಷ್ಟರು, ಬೆಂಗಳೂರು ರವರ ಮೂಲಕ ನೇಮಕ ಮಾಡಿಕೊಳ್ಳಲು ಉದ್ದೇಶಿಸಲಾಗಿದೆಯೆಂದು ಮತ್ತು ಎಲ್‌ಸಿಡಿ ಪ್ರಾಜೆಕ್ಟರ್ ಆಪರೇಟರ್ ಒಬ್ಬರನ್ನು ನೇಮಿಸಿಕೊಳ್ಳಲು ಅನುಮತಿ ಕೋರಿರುವರು.

ದಿನಾಂಕ : 3–10–2009ರ ಸರ್ಕಾರಿ ಪತ್ರ ಸಂಖ್ಯೆ ಕಸಂವಾಪ್ರ 19 ಕೆಎಂಯು 2009ರಲ್ಲಿ ಟಾಟಾ ಸುಮೋ ವಾಹನವನ್ನು ಖರೀದಿಸಿದ್ದನ್ನು ಸ್ಥಿರೀಕರಿಸಿದ ಹಾಗೂ ಎರಡು ದೂರವಾಣಿ ಸಂಪರ್ಕ ಹೊಂದಲು ಅನುಮತಿ ನೀಡಲಾಗಿದೆ. ಬಾಕಿ ಇರುವ ಗ್ರೂಪ್–ಡಿ –50 ಹುದ್ದೆಗಳು ಮತ್ತು ಇಲಾಖೆಯಲ್ಲಿ ಖಾಲಿ ಇರುವ 28 ಗ್ರೂಪ್–ಡಿ ಹುದ್ದೆಗಳನ್ನು ಹೊರಗುತ್ತಿಗೆ ಮೇಲೆ ಭರ್ತಿ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆರವರು ಪರಿಷ್ಕರಿಸಿದ ಪ್ರಸ್ತಾವನೆಯನ್ನು ದಿನಾಂಕ 19–02–2010 ರಂದು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆರವರ ಪ್ರಸ್ತಾವನೆಗಳನ್ನು ಪರಿಶೀಲಿಸಲಾಯಿತು.

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯಲ್ಲಿ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸೃಜಿಸಲಾದ ಹುದ್ದೆಗಳಲ್ಲಿ ಭರ್ತಿ ಮಾಡಲು ಬಾಕಿ ಇರುವ ಕಂಪ್ಯೂಟರ್ ಆಪರೇಟರ್–2 ಹುದ್ದೆಗಳು, ಗ್ರೂಪ್ ಡಿ–50 ಹುದ್ದೆಗಳು ಮತ್ತು ಇಲಾಖೆಯಲ್ಲಿ ಖಾಲಿ ಇರುವ 28 ಗ್ರೂಪ್–ಡಿ ಹುದ್ದೆಗಳನ್ನು ಅರ್ಹ ಏಜೆನ್ಸಿ ಮೂಲಕ ಒಂದು ವರ್ಷದ ಅವಧಿಗೆ ಹೊರಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಳ್ಳಲು ಸರ್ಕಾರವು ತೀರ್ಮಾನಿಸಿ, ಮುಂದಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಕಸಂವಾಪ್ರ 106 ಕೆಎಂಯು 2009, ಬೆಂಗಳೂರು, ದಿನಾಂಕ: 25–02–2010**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯಲ್ಲಿ ಮಂಜೂರಾಗಿ ಖಾಲಿ ಇರುವ ಕೇವಲ 28 ಗ್ರೂಪ್–ಡಿ ಹುದ್ದೆಗಳನ್ನು ಮತ್ತು ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 88 ಸ್ವೀಮರ 2008, ದಿನಾಂಕ : 30–12–2008 ರಲ್ಲಿ ಸೃಜಿಸಲಾಗಿದ್ದ 2 ಕಂಪ್ಯೂಟರ್ ಆಪರೇಟರ್‌ಗಳನ್ನು ಮತ್ತು 50 ಗ್ರೂಪ್ ಡಿ ಹುದ್ದೆಗಳನ್ನು ಅರ್ಹ ಏಜೆನ್ಸಿ ಮೂಲಕ ಮಾತ್ರ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯಿದೆ 1999 ಹಾಗೂ ಅದರ ನಿಯಮಗಳು 2000 ರನ್ವಯ ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 137 ಈಕಾಅ 2005, ದಿನಾಂಕ 26–07–2005 ರ ಸೂಚನೆಗಳನ್ವಯ ಪರಿಶೀಲಿಸಿ, ಹೊರಗುತ್ತಿಗೆ ಆಧಾರದ ಮೇಲೆ ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಭರ್ತಿ ಮಾಡಿಕೊಳ್ಳಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರಿಗೆ ಸರ್ಕಾರವು ಅನುಮತಿ ನೀಡಿದೆ.

ಇದಕ್ಕೆ ತಗಲುವ ವೆಚ್ಚವನ್ನು 2009–10 ನೇ ಸಾಲಿನ ಲೆಕ್ಕಶೀರ್ಷಿಕೆ 2205–00–103–0–01–059 (ಯೋಜನೆ) ಇತರೆ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 885 ವೆಚ್ಚ–7/2009, ದಿನಾಂಕ : 13–10–2009 ರಲ್ಲಿ ಸಹಮತಿಯನ್ನು ಪಡೆದು ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 638

**(ಎಂ.ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಉಪ ನಿರ್ದೇಶಕರ ಕಛೇರಿ, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಕಛೇರಿಯ ಅಧೀಕ್ಷಕರ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಸಂಕಇ 69 ಸ್ವೀಮರ 2005, ದಿನಾಂಕ 27-07-2005
2. ಸರ್ಕಾರಿ ಆದೇಶ ಸಂಖ್ಯೆ : ಸಂಕಇ 60 ಕೆಎಂಯು 2006, ದಿನಾಂಕ 12-07-2006
3. ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 70 ಕೆಎಂಯು 2007, ದಿನಾಂಕ 12-06-2007
4. ಆಯುಕ್ತಕರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಇವರ ಪತ್ರ ಸಂಖ್ಯೆ : ಸಂ : ಆಪ್ರಾಸಂಪ/ಇಎಸ್‌ಟಿ/2009-10/446, ದಿನಾಂಕ 16-02-2010

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ 27-7-2005ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಸಂಗ್ರಹಾಳಯಗಳು ಮತ್ತು ಪರಂಪರೆ ಇಲಾಖೆಯಲ್ಲಿ ಒಂದು ಕಛೇರಿ ಅಧೀಕ್ಷಕರ ಹುದ್ದೆಯನ್ನು ಸೃಜಿಸಿ ಆದೇಶಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ : 12-07-2006ರ ಆದೇಶದಲ್ಲಿ ಸದರಿ ಕಛೇರಿ ಅಧೀಕ್ಷಕರ ಹುದ್ದೆಯನ್ನು ದಿನಾಂಕ 01-04-2006 ರಿಂದ 31-03-2007 ರವರೆಗೆ ಮುಂದುವರಿಸಿ ಆದೇಶಿಸಲಾಗಿದೆ. ತದನಂತರ ಮೇಲೆ (3) ರಲ್ಲಿ ಓದಲಾದ ದಿನಾಂಕ 12-06-2007ರ ಆದೇಶದಲ್ಲಿ ದಿನಾಂಕ : 01-04-2007 ರಿಂದ 31-03-2008 ರವರೆಗಿನ ಮತ್ತೊಂದು ವರ್ಷದ ಅವಧಿಗೆ ಕಛೇರಿ ಅಧೀಕ್ಷಕರ ಹುದ್ದೆಯನ್ನು ಮುಂದುವರೆಸಿ ಆದೇಶಿದೆ. ಮೇಲೆ (4)ರಲ್ಲಿ ಓದಲಾದ ದಿನಾಂಕ : 16-02-2010ರ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯವರು ಪ್ರಸ್ತಾವನೆ ಸಲ್ಲಿಸಿ ಸದರಿ ಕಛೇರಿ ಅಧೀಕ್ಷಕರ ಹುದ್ದೆಯನ್ನು ದಿನಾಂಕ 01-04-2008 ರಿಂದ 31-03-2010 ರವರೆಗಿನ ಎರಡು ವರ್ಷಗಳ ಅವಧಿಗೆ ಮುಂದುವರೆಸಿ ಆದೇಶಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಕಛೇರಿ ಅಧೀಕ್ಷಕರ ಹುದ್ದೆಯನ್ನು ದಿನಾಂಕ : 01-04-2008 ರಿಂದ 31-3-2010 ರವರೆಗಿನ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 243 ಕೆಎಂಯು 2007, ಬೆಂಗಳೂರು, ದಿನಾಂಕ: 25-02-2010**

ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಉಪ ನಿರ್ದೇಶಕರ ಕಛೇರಿ, ಮೈಸೂರು, ಇಲ್ಲಿನ ಒಂದು ಕಛೇರಿ ಅಧೀಕ್ಷಕರ ಹುದ್ದೆಯನ್ನು ದಿನಾಂಕ 01-04-2008 ರಿಂದ 31-03-2010 ರವರೆಗಿನ ಎರಡು ವರ್ಷಗಳ ಅವಧಿಗೆ ಮುಂದುವರೆಸಿ ಆದೇಶಿಸಿದೆ. ಈ ಸಂಬಂಧ ಉಂಟಾಗುವ ವೆಚ್ಚವನ್ನು 2009-10ನೇ ಸಾಲಿನ ಲೆಕ್ಕ ಶೀರ್ಷಿಕೆ 2205-00-103-0-21 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 1205 ವೆಚ್ಚ-7/2009, ದಿನಾಂಕ 19-12-2009 ರಲ್ಲಿ ನೀಡಿದ ಸಹಮತಿ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-07-1996ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಆದೇಶದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 639

**(ಎಂ.ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಒಳಾಡಳಿತ ಸಚಿವಾಲಯ

**ವಿಷಯ :** ಬೆಂಗಳೂರು 10 ಹೆಚ್ಚುವರಿ ಮುಖ್ಯ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ (ಸಿವಿಲ್ ನ್ಯಾಯಾಧೀಶರು (ಹಿ.ವಿ) ಶ್ರೇಣಿ)ಗಳಿಗೆ ಹೊಂದಿಕೊಂಡಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರುಗಳ ಹಾಗೂ ಅವರ ಕಛೇರಿಗೆ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆ ಕುರುತು.

**ಓದಲಾಗಿದೆ :** ಸರ್ಕಾರದ ಆದೇಶ ಸಂ : ಲಾ 47 ಎಲ್‌ಸಿಇ 2004, ದಿನಾಂಕ 23-06-2005
ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ : ಡಿಪಿಎನ್/ಸಿಶಾ1/110/2009-10, ದಿನಾಂಕ 15-07-2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 03-06-2005ರ ಸರ್ಕಾರದ ಆದೇಶದನ್ವಯ ಬೆಂಗಳೂರಿನಲ್ಲಿ 10 ಹೆಚ್ಚುವರಿ ಮುಖ್ಯ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ (ಸಿವಿಲ್ ನ್ಯಾಯಾಧೀಶರು (ಹಿ.ವಿ) ಶ್ರೇಣಿ)ಗಳನ್ನು ಸೃಜನೆ ಮಾಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ದಿನಾಂಕ 15-07-2009ರ ಪತ್ರದಲ್ಲಿ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಸೃಜನೆಯಾಗಿ ಶೀಘ್ರದಲ್ಲಿ ಕಾರ್ಯಾರಂಭಗೊಳ್ಳಲಿರುವ ನ್ಯಾಯಾಲಯಗಳಲ್ಲಿ ಸರ್ಕಾರದ ಪರವಾಗಿ ರಾಜ್ಯವನ್ನು ಪ್ರತಿನಿಧಿಸಿ,ಪ್ರಕರಣಗಳನ್ನು ನಡೆಸಲು, ಸದರಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ |
|---|---|---|
| 1. | **ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು** | 10 |
| 2. | **ಬೆರಳಚ್ಚುಗಾರರು** | 10 |
| 3. | **ದಲಾಯತ್** | 10 |

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 347 ಪಿಪಿಇ 2009, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲಿ, ಬೆಂಗಳೂರಿನ 10 (ಹತ್ತು) ಹೆಚ್ಚುವರಿ ಮುಖ್ಯ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ (ಸಿವಿಲ್ ನ್ಯಾಯಾಧೀಶರು (ಹಿ.ವಿ) ಶ್ರೇಣಿ)ಗಳಿಗೆ ಹೊಂದಿಕೊಂಡಂತೆ ಈ ಕೆಳಕಂಡ ಹುದ್ದೆಗಳನ್ನು ಸದರಿ ನ್ಯಾಯಾಲಯಗಳು ಕಾರ್ಯಾರಂಭ ಮಾಡಿದ ದಿನಾಂಕದಿಂದ ಜಾರಿಗೆ ಬರುವಂತೆ, ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಿದೆ.

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ |
|---|---|---|
| 1. | **ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು** | 10 |
| 2. | **ಬೆರಳಚ್ಚುಗಾರರು** | 10 |
| 3. | **ದಲಾಯತ್** | 10 |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-ನ್ಯಾಯಾಪರಿಪಾಲನೆ-00-114-ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು-0-02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು" ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ : ಎಫ್‌ಡಿ 800 ವೆಚ್ಚ-11/2009, ದಿನಾಂಕ : 30-12-2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.640

**(ಕೆ.ಸಿ. ಸಿದ್ದಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸ ಮತ್ತು ಅಭಿಯೋಗಗಳು)

**ಜಲಸಂಪನ್ಮೂಲ ಸಚಿವಾಲಯ**

**ವಿಷಯ** : ಬೆಳಗಾಂ ಜಿಲ್ಲೆ, ಗೋಕಾಕ್ ತಾಲ್ಲೂಕು ಕೈತನಾಳ ಹೊಸೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ** : ದಿನಾಂಕ 07-08-09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರವಲಯ, ಬಿಜಾಪುರ ರವರ ಪತ್ರ ಸಂಖ್ಯೆ : ಮುಇಂ/ಸನೀ(ಊ)ವ/ಬಿಜಾ/ಭೂಸ್ವಾಪ್ರ/2009-10/4675.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಗೋಕಾಕ್ ತಾಲ್ಲೂಕು ಕೈತನಾಳ ಹೊಸೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕೈತನಾಳ ಹೊಸೂರು ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ. 26,97,744-00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 27-11-2003

ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 25-11-2005.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಅಥಣಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಪತ್ರ ಸಂಖ್ಯೆ : ಆರ್‌ಡಿ 433 ಎಲ್‌ಸಿಬಿ 2008, ದಿನಾಂಕ 16-06-09ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಕೈತನಾಳ ಹೊಸೂರು ಗ್ರಾಮದ ಸ. ನಂ. | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 104/06 | 259 | 1-04 | 170790 |
| 2 | 106/06 | 258 | 8-06 | 1263477 |
| 3 | 108/06 | 258 | 8-06 | 1263477 |
| | | | **ಒಟ್ಟು** | **2697744** |

***ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 128 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2010**

ಬೆಳಗಾಂ ಜಿಲ್ಲೆ, ಗೋಕಾಕ್ ತಾಲ್ಲೂಕು ಕೈತನಾಳ ಹೊಸೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕೈತನಾಳ ಹೊಸೂರು ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನದ ಮೊತ್ತ ರೂ. 26,97,744-00ಗಳನ್ನು (ಇಪ್ಪತ್ತಾರು ಲಕ್ಷದ ತೊಂಭತ್ತೇಳು ಸಾವಿರದ ಏಳುನೂರ ನಲವತ್ನಾಲ್ಕು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009-10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 641 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ** : ಬೀದರ್ ಜಿಲ್ಲೆ, ಔರಾದ ತಾಲ್ಲೂಕು ಆಲೂರು–ಬೇಲೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ರಚಿಸಿರುವ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ, ಇವರ ದಿನಾಂಕ 09–02–2010ರ ಪತ್ರ ಸಂಖ್ಯೆ : ಮುಇಂ/ಸನೀ/ಉವ/ಬಿಜಾ/ಭೂಸ್ವಾಪ್ರ/2009–10/889.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಬೀದರ್ ಜಿಲ್ಲೆ, ಔರಾದ ತಾಲ್ಲೂಕು ಆಲೂರು–ಬೇಲೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಶೇಂಬಳ್ಳಿ ಮತ್ತು ಖಾಶೆಂಪೂರ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಭೂಸ್ವಾಧೀನಾಧಿಕಾರಿಗಳು ರಚಿಸಿರುವ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸುವ ಕುರಿತು ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 25–05–2000

ಕರ್ನಾಟಕ ಭೂಸ್ವಾಧೀನ ಕಾಯ್ದೆ 11(ಎ)ರಡಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 30–04–2002.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬೀದರ್ ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ಎಲ್.ಎ.ಸಿ. 18/05, 20/05, 28/05, 30/05 ಮತ್ತು 32/05 ಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುತ್ತದೆ. ಸದರಿ ತೀರ್ಪಿನ ಅನ್ವಯ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರನ್ವಯ ಹೆಚ್ಚುವರಿ ಪರಿಹಾರ ಧನ ನೀಡುವಂತೆ ಕೆಳಕಂಡ ಭೂಮಾಲೀಕರು ನಿಗಧಿತ ಕಾಲಮಿತಿಯಲ್ಲಿ ಭೂಸ್ವಾಧೀನಾಧಿಕಾರಿಗಳಲ್ಲಿ ಅರ್ಜಿ ಸಲ್ಲಿಸಿರುವ ಮೇರೆಗೆ ಭೂಸ್ವಾಧೀನಾಧಿಕಾರಿಗಳು ಭೂಸ್ವಾಧೀನ ಕಾಯಿದೆ ಕಲಂ 28(ಎ)ರಡಿ ಹೆಚ್ಚುವರಿ ಪರಿಹಾರ ಧನಕ್ಕಾಗಿ ದಿನಾಂಕ 06–11–2009ರಂದು ಐತೀರ್ಪು ರಚಿಸಿರುತ್ತಾರೆ.

ಪರಿಹಾರ ಪಾವತಿ ಪ್ರಕರಣಗಳ ವಿವರಗಳು ಈ ಕೆಳಕಂಡಂತಿವೆ.

| ಕ್ರ. ಸಂ. | ಸ.ನಂ. | ವಿಸ್ತೀರ್ಣ ಎ–ಗುಂ | ಗ್ರಾಮ | ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನನ್ವಯ | ಪರಿಹಾರ ಧನ (ರೂ.ಗಳಲ್ಲಿ) |
|---|---|---|---|---|---|
| 1 | 16 | 0–39 | ಶೇಂಬಳ್ಳಿ | ,, | 267443 |
| 2 | 23/1–3 | 0–26 | ಖಾಶೆಂಪೂರ | ,, | 394100 |
| 3 | 24/1–3 | 0–25 | | | |
| 4 | 23 | 0–30 | ಖಾಶೆಂಪೂರ | ,, | 231823 |
| 5 | 23/1–3 | 0–06 | ಖಾಶೆಂಪೂರ | ,, | 46361 |
| 6 | 23/1–3 | 0–06 | ಖಾಶೆಂಪೂರ | ,, | 46361 |
| 7 | 16/4–ಇ | 2–10 | ಶೇಂಬಳ್ಳಿ | ,, | 617182 |
| | | | | ಒಟ್ಟು | **1603270** |

***ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 39 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2010**

ಬೀದರ್ ಜಿಲ್ಲೆ, ಹೌರಾದ ತಾಲ್ಲೂಕು ಆಲೂರು-ಬೇಲೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಶೇಂಬಳ್ಳಿ ಮತ್ತು ಖಾಶೆಂಪೂರ ಗ್ರಾಮಗಳಿಗೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನ ಆಧಾರದ ಮೇಲೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಭೂಸ್ವಾಧೀನಾಧಿಕಾರಿಗಳು ರಚಿಸಿರುವ ಐತೀರ್ಪಿನಂತೆ ಪರಿಹಾರ ಧನದ ಮೊತ್ತ ರೂ. 16,03,270-00 (ಹದಿನಾರು ಲಕ್ಷದ ಮೂರು ಸಾವಿರದ ಇನ್ನೂರ ಎಪ್ಪತ್ತು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009-10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16-05-2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 642

**ಜಲಸಂಪನ್ಮೂಲ ಸಚಿವಾಲಯ**

**ವಿಷಯ** : ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಬನ್ನಿಕಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ, ಇವರ ದಿನಾಂಕ 07-12-2009ರ ಪತ್ರ ಸಂಖ್ಯೆ : ಮುಇಂ/ಸನೀ/ಉವ/ಬಿಜಾ/ಭೂಸ್ವಾಪ್ರ/2009-10/7318.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಬನ್ನಿಕಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬನ್ನಿಕಲ್ ಮತ್ತು ಗದ್ದಿಕೇರಿ ಗ್ರಾಮದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 29-06-1989

ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 16-10-1990.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೊಸಪೇಟೆ ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ನಿರ್ಧರಿಸಿದೆ.

ಪರಿಹಾರ ಪಾವತಿ ಪ್ರಕರಣಗಳ ವಿವರಗಳು ಈ ಕೆಳಕಂಡಂತಿವೆ.

| ಕ್ರ. ಸಂ. | ಎಲ್ಎಸಿ ಪ್ರಕರಣ ಸಂ. | ಬನ್ನಿಕಲ್ ಹಾಗೂ ಗದ್ದಿಕೇರಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. |
|---|---|---|---|
| 1 | 37/94 | 308ಎ/5ಬಿ | 0–13 |
| 2 | 38/94 | 257ಬಿ/2 | 0–38 |
| 3 | 39/94 | 303ಎ/1ಬಿ | 0–12 |
| 4 | 39/94 | 297ಸಿ/1ಬಿ/2, 266/2 | 0–12,0–16 |
| 5 | 41/94 | 394ಸಿ/2 | 0–23 |
| 6 | 42/94 | 88/2, 89/2 | 0–11, 0–08 |
| 7 | 43/94 | 364ಬಿ/2ಬಿ | 0–02 |
| 8 | 47/94 | 277ಎ/2 | 0–09 |
| 9 | 52/94 | 304ಓ/2 | 0–12 |
| 10 | 53/94 | 401/ಎ/2/ಎ1, 401/1ಎ | 0–10, 0–08 |
| 11 | 54/94 | 303ಎ/2ಬಿ | 0–05 |
| 12 | 57/94 | 291/ಬಿ/2 | 0–11 |
| 13 | 58/94 | 297/ಬಿ/2, 280ಎ/2 | 0–12, 0–15 |
| 14 | 59/94 | 276ಬಿ/1/ಬಿ, 276ಬಿ/2ಎ,254/1 | 0–06, 0–02,0–33 |
| **ಪರಿಹಾರದ ಒಟ್ಟು ಮೊತ್ತ ರೂ. 98,353–00** | | | |

***ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 13 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2010**

ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಬನ್ನಿಕಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬನ್ನಿಕಲ್ ಮತ್ತು ಗದ್ದಿಕೇರಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 98,353–00 (ತೊಂಬತ್ತೆಂಟು ಸಾವಿರದ ಮೂರು ನೂರ ಐವತ್ತ್ಮೂರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 643

## ಜಲಸಂಪನ್ಮೂಲ ಸಚಿವಾಲಯ

**ವಿಷಯ** : ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು ಬಿದನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ** : ದಿ. 03–09–2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಪತ್ರ ಸಂಖ್ಯೆ : ಮುಇಂ/ಸನೀ/(ಉ)ವ/ಬಿಜೆಪಿ/ಭೂಸ್ವಾ/2009–10/5222.

**2.** ದಿ. 30–09–2008ರ ಸರ್ಕಾರದ ಆದೇಶ ಸಂಖ್ಯೆ : ಸನೀಇ 51 ಭೂಸ್ವಾಪ್ರ 2007.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು ಬಿದನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬಿದನೂರು ಗ್ರಾಮದ ಜಮೀನುಗಳಿಗೆ ನ್ಯಾಯಾಲಯದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ. 22,67,885–00 ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ ;

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 02–12–1993

ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 12–03–1996.

ಭೂಸ್ವಾಧೀನಕ್ಕೊಳಪಟ್ಟ ಜಮೀನಿನ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಇನ್ನೂ ಹೆಚ್ಚಿನ ಪರಿಹಾರ ಧನಕ್ಕಾಗಿ ಆಳಂದ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ಇದರಲ್ಲಿ ಎಲ್.ಎ.ಸಿ. ಸಂಖ್ಯೆ : 458/99, 459/99, 460/99, 461/99, 462/99, 463/99 ಮತ್ತು 464/99ರಲ್ಲಿ ಗುಲ್ಬರ್ಗಾ (ಹಿರಿಯ ಶ್ರೇಣಿ) ನ್ಯಾಯಾಲಯವು ಒಂದೇ ಸಾಮಾನ್ಯ ತೀರ್ಪನ್ನು ನೀಡಿದೆ. ಈ ಪ್ರಕರಣದಲ್ಲಿನ ಎಲ್ಲಾ ಸ.ನಂ. ಗಳಿಗೆ ನ್ಯಾಯಾಲಯವು ಪ್ರತಿ ಎಕರೆಗೆ ರೂ. 38,000/–ಗಳಂತೆ ಜಮೀನಿನ ಬೆಲೆಯನ್ನು ನಿಗದಿಪಡಿಸಿದೆ.

ಸಾಮಾನ್ಯ ತೀರ್ಪಿನಲ್ಲಿ ಸೇರಿದ ಎಲ್.ಎ.ಸಿ. ಸಂಖ್ಯೆ : 458/99 ಮತ್ತು 460/99 ಪ್ರಕರಣಗಳಲ್ಲಿ ಯಾವುದೇ ಮೇಲ್ಮನವಿ ಸಲ್ಲಿಸಲಾಗಿಲ್ಲ. ಉಳಿದ 5 ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯದ ತೀರ್ಪನ್ನು ಪ್ರಶ್ನಿಸಿ ಎಂಎಫ್ಎ ಸಂಖ್ಯೆ : 3599/02, 3592/02, 3598/02, 3591/02 ಮತ್ತು 3586/02ನ್ನು ಸಲ್ಲಿಸಲಾಗಿತ್ತು. ಇದರಲ್ಲಿ 3599/02 ಮತ್ತು 3594/92ರಲ್ಲಿ ಉಚ್ಚ ನ್ಯಾಯಾಲಯವು ಸಿವಿಲ್ ನ್ಯಾಯಾಲಯದ ತೀರ್ಪನ್ನು ಸ್ಥಿರೀಕರಿಸಿದ್ದರಿಂದ ಹಾಗೂ ಈ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸಲು ಕಾನೂನು ಇಲಾಖೆಯು ಅಭಿಪ್ರಾಯ ನೀಡಿದ್ದರಿಂದ, ಈ ಎರಡು ಪ್ರಕರಣಗಳಲ್ಲಿ ನ್ಯಾಯಾಲಯದ ತೀರ್ಪಿನಂತೆ ಪರಿಹಾರ ಧನ ಪಾವತಿಸಲು ಮೇಲೆ (2) ರಲ್ಲಿ ಓದಲಾದ ದಿನಾಂಕ 30–09–08ರ ಆದೇಶದಲ್ಲಿ ಅನುಮೋದನೆ ನೀಡಿದೆ. ಎಂಎಫ್.ಎ. ಸಂಖ್ಯೆ : 3598/02, 3591/02 ಮತ್ತು 3586/92ರ ತೀರ್ಪಿನಲ್ಲಿ ಉಚ್ಚ ನ್ಯಾಯಾಲಯವು ಸಿವಿಲ್ ನ್ಯಾಯಾಲಯದ ತೀರ್ಪನ್ನು ಎತ್ತಿ ಹಿಡಿದಿದೆ. ಪ್ರಕರಣವಾರು ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್ಎಸಿ | ಎಂಎಫ್ಎ | ಬಿದನೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 458/99 | – | 175/2 | 0–08 | 30188 |
| 2 | 460/99 | – | 287/1, 287/2 | 1–19 | 222638 |
| 3 | 461/99 | 3598/02 | 318/2, 318/3 | 6–22 | 988662 |
| 4 | 463/99 | 3591/02 | 327/4 | 3–11 | 494331 |
| 5 | 464/99 | 3586/02 | 328/1 | 3–21 | 532066 |
| | | | | **ಒಟ್ಟು** | **2267885** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 145 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2010**

ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು ಬಿದನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಬಿದನೂರು ಗ್ರಾಮಕ್ಕೆ ಸೇರಿದ ಪ್ರಸ್ತಾವನೆಯಲ್ಲಿ ನಮೂದಿಸಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ

ನ್ಯಾಯಾಲಯದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 22,67,885–00ಗಳನ್ನು (ಇಪ್ಪತ್ತೆರಡು ಲಕ್ಷದ ಅರವತ್ತೇಳು ಸಾವಿರದ ಎಂಟು ನೂರ ಎಂಭತ್ತೈದು ರೂ.ಗಳು ಮಾತ್ರ) ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಪ್ರಕರಣವಾರು ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 644 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ** : ಗುಲ್ಬರ್ಗಾ ಜಿಲ್ಲೆ, ಯಾಧಗೀರ್ ತಾಲ್ಲೂಕು, ಗುರನೂರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಧನ ಪಾವತಿಸುವ ಕುರಿತು.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 24–11–2009ರಂದು ಕೊನೆಗೊಂಡ ಪತ್ರ ಸಂಖ್ಯೆ : ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2009–10/6985.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಯಾಧಗೀರ್ ತಾಲ್ಲೂಕು ಗುರನೂರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 16–03–1995

ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 19–12–1995.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಯಾದಗೀರ್ ಸಿವಿಲ್ ನ್ಯಾಯಾಲಯದಲ್ಲಿ (ಹಿರಿಯ ಶ್ರೇಣಿ) ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಪ್ರಕರಣದ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್‌ಎಸಿ ಪ್ರಕರಣದ ಸಂ. | ಗುರನೂರ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 167/97 | 18/ಎ | 1–16 | 91909–00 |
| 2 | 170/97 | 241/ಎ.ಬಿ.ಸಿ. | 0–14 | 22976–00 |
| 3 | 162/97 | 176 | 1–20 | 98476–00 |
| 4 | 169/97 | 224/ಎ.ಬಿ.ಸಿ. | 5–27 | 372565–00 |
| 5 | 165/97 | 209 | 2–04 | 137866–00 |
| | | | **ಒಟ್ಟು** | **723792–00** |

***ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಸಿವಿಲ್ ನ್ಯಾಯಾಲಯದ ತೀರ್ಪಿನ ಮೇಲೆ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 386 ಎಲ್‌ಸಿಜಿ 2008 ದಿನಾಂಕ 22-05-2009ರಲ್ಲಿ ಅಭಿಪ್ರಾಯ ನೀಡಿದೆ.

**ವಿಷಯವನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.**

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 105 ಭೂಸ್ವಾಪ್ರ 2007, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2010**

ಗುಲ್ಬರ್ಗಾ ಜಿಲ್ಲೆ, ಯಾಧಗೀರ್ ತಾಲ್ಲೂಕು ಗುರನೂರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಗುರನೂರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾ ಹಾಕಿದ ಪರಿಹಾರ ಧನ ಮೊತ್ತ ತೂ. 7,23,792-00 ಗಳನ್ನು (ಏಳು ಲಕ್ಷದ ಇಪ್ಪತ್ತಮೂರು ಸಾವಿರದ ಏಳು ನೂರ ತೊಂಬತ್ತೆರಡು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009-10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳೂ-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16-05-2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 645

**ಜಲಸಂಪನ್ಮೂಲ ಸಚಿವಾಲಯ**

**ವಿಷಯ** : ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ರಾಶಿಂಗ್ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ) ಪ್ರಕಾರ ಉಪ ವಿಭಾಗಾಧಿಕಾರಿಗಳು, ಬೆಳಗಾಂರವರ ಪುರವಣಿ ಐತೀರ್ಪು ದಿನಾಂಕ 10-10-2009ರ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 17-12-2009ರ ಪತ್ರ ಸಂಖ್ಯೆ : ಮುಇಂ/ಸನೀ/(ಉ)ವ/ಭೂಸ್ವಾಪ್ರ/09-10/7550.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರು ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ರವರ ದಿನಾಂಕ 17-12-09ರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು, ರಾಶಿಂಗ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರನ್ವಯ ಬೆಳಗಾಂನ ಉಪ ವಿಭಾಗಾಧಿಕಾರಿಗಳು ಮಾಡಿರುನ ಐತೀರ್ಪಿನಂತೆ ಪರಿಹಾರ ಧನ ಪಾವತಿಸಲು ರೂ. 25,84,519-00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಕೆರೆಯ ಮೂಲ ಭೂಸ್ವಾಧೀನ ಪ್ರಕ್ರಿಯೆಯ ವಿರಗಳ ಕೆಳಕಂಡಂತಿದೆ;

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 27-04-1995

ಮೂಲ ಐತೀರ್ಪಿನ ದಿನಾಂಕ 14-05-1998

ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಬೆಳಗಾಂನ ಉಪ ವಿಭಾಗಾಧಿಕಾರಿಗಳ ಐತೀರ್ಪಿನ ದಿನಾಂಕ 08-06-2005 ಮತ್ತು ತಿದ್ದುಪಡಿ ದಿನಾಂಕ 10-10-2009.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದ ರಾಶಿಂಗ ಗ್ರಾಮದ ಸ.ನಂ. 294ರ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೆಚ್ಚಿನ ಪರಿಹಾರಧನಕ್ಕಾಗಿ ಹುಕ್ಕೇರಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ಸಂಖ್ಯೆ : 2/2002ನ್ನು ದಾಖಲಿಸಿದ್ದು, ಮಾನ್ಯ ಸಿವಿಲ್ ನ್ಯಾಯಾಲಯವು ಪ್ರತಿ

ಎಕರೆಗೆ ಭೂಮೌಲ್ಯವನ್ನು ರೂ. 1,35,135–00ಗಳಿಗೆ ಹೆಚ್ಚಿಸಿ ತೀರ್ಪು ನೀಡಿದೆ. ಈ ತೀರ್ಪಿನ್ನು ಆಧರಿಸಿ ಹೆಚ್ಚಿನ ಪರಿಹಾರ ಧನ ನೀಡಬೇಕೆಂದು ಭೂಸ್ವಾಧೀನದಲ್ಲಿ ಸೇರಿದ್ದ ಉಳಿದ ಕೆಲವು ಸ.ನಂ.ಗಳ ಭೂಮಾಲೀಕರು ನಿಗದಿತ ಅವಧಿಯಲ್ಲಿ ಅರ್ಜಿ ಸಲ್ಲಿಸಿದ ಹಿನ್ನೆಲೆಯಲ್ಲಿ ಭೂಸ್ವಾಧೀನಾಧಿಕಾರಿಗಳು ಕಲಂ 28(ಎ)ರಡಿ ದಿನಾಂಕ 08–06–2005ರಂದು ಐತೀರ್ಪು ರಚಿಸಿರುತ್ತಾರೆ. ಸದರಿ ಐತೀರ್ಪಿನಲ್ಲಿ ಜಮೀನಿನ ಮಾರುಕಟ್ಟೆ ಬೆಲೆ ಹಾಗೂ ಪರಿಹಾರ ಧನದ ಮೇಲೆ ಶೇ. 9ರಷ್ಟು ಹಾಗೂ ಶೇ. 15ರ ಬಡ್ಡಿ ದರದಂತೆ ಲೆಕ್ಕ ಹಾಕಲಾಗಿದೆ. ಇದರ ವಿರುದ್ಧ ಭೂಮಾಲೀಕರು ಹೆಚ್ಚುವರಿ ಮಾರುಕಟ್ಟೆ ದರದ ಮೇಲೆ ಬಡ್ಡಿ ನೀಡುವಂತೆ ಆಗ್ರಹಿಸಿ ಕರ್ನಾಟಕ ಉಚ್ಚ ನ್ಯಾಯಾಲಯದ ಧಾರವಾಡ ಸಂಚಾರಿ ಪೀಠದಲ್ಲಿ ರಿಟ್ ಅರ್ಜಿಗಳನ್ನು ದಾಖಲಿಸಿ ಮಾನ್ಯ ನ್ಯಾಯಾಲಯದಲ್ಲಿ ಹೆಚ್ಚುವರಿ ಮಾರುಕಟ್ಟೆ ಬೆಲೆಯ ಮೇಲೆ ಬಡ್ಡಿ ದರ ನೀಡುವಂತೆ ಆದೇಶ ಪಡೆದುಕೊಂಡಿದ್ದಾರೆ.

ಉಚ್ಚ ನ್ಯಾಯಾಲಯದ ತೀರ್ಪಿನಂತೆ ಭೂಸ್ವಾಧೀನಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ತೀರ್ಪಿಗೆ ತಿದ್ದುಪಡಿ ಮಾಡಿರುತ್ತಾರೆ. ಅದರಂತೆ ಪಾವತಿಸಬೇಕಾದ ಪರಿಹಾರ ಧನದ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರ. ಸಂ. | ರಾಶಿಂಗ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಭೂ–ಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಐತೀರ್ಪಿನ ಸಂಖ್ಯೆ ಮತ್ತು ದಿನಾಂಕ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 274 | 0–21 | ಭೂಸ್ವಾ/ವಿವಹಿ–1570 (ಎ) 10–10–2009 | 33294 |
| 2 | 277 | 0–28 | | 44393 |
| 3 | 278 | 2–10 | | 142702 |
| 4 | 279 | 5–10 | | 332978 |
| 5 | 280 | 2–00 | | 126847 |
| 6 | 281 | 04–27 | | 296508 |
| 7 | 293 | 00–35 | | 55493 |
| 8 | 295 | 15–00 | | 951373 |
| 9 | 296/297 | 01–00 | | 63423 |
| 10 | 299 | 01–30 | | 110991 |
| 11 | 300 | 3–38 | | 237840 |
| 12 | 301 | 2–19 | | 156975 |
| 13 | 302 | 0–06 | | 20609 |
| 14 | 303 | 0–06 | | 9510 |
| 15 | 304 | 0–01 | | 1583 |
| | | | ಒಟ್ಟು | **2584519** |

ವಿಷಯವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 14 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2010**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು, ರಾಶಿಂಗ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ರಾಶಿಂಗ್ ಗ್ರಾಮದ ಮೇಲ್ಕಂಡ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರನ್ವಯ ಬೆಳಗಾಂನ ಉಪ ವಿಭಾಗಾಧಿಕಾರಿಗಳು ನೀಡಿರುವ ಐತೀರ್ಪಿನಂತೆ ಪರಿಹಾರ ಧನದ ಮೊತ್ತ 25,84,519–00 ರೂ.ಗಳನ್ನು (ಇಪ್ಪತ್ತೈದು ಲಕ್ಷದ ಎಂಭತ್ತಾಲ್ಕು ಸಾವಿರದ ಐನೂರ ಹತ್ತೊಂಭತ್ತು ರೂ.ಗಳು ಮಾತ್ರ) ಪ್ರಸ್ತಾವನೆಯಲ್ಲಿ ತಿಳಿಸಿರುವ ಸ.ನಂ.ಗಳಿಗೆ ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ.

ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೆ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 646

**ಶಿಕ್ಷಣ ಸಚಿವಾಲಯ**

**ಸಂಖ್ಯೆ : ಇಡಿ 16 ಟಿಇಸಿ 2008 (ಭಾಗ), ಬೆಂಗಳೂರು, ದಿನಾಂಕ 20–02–2010**

## ತಿದ್ದುಪಡಿ ಆದೇಶ

ಸರ್ಕಾರದ ಆದೇಶ ಸಂಖ್ಯೆ ಇಡಿ 16 ಟಿಇಸಿ 2008, ದಿನಾಂಕ 03–05–2008ರ ಅನುಬಂಧದ ಮೊದಲನೆ ಪಟ್ಟಿಯ ಕಾಲಂ 4 ರಲ್ಲಿ "ಉಪನ್ಯಾಸಕರು (ಭೌತಶಾಸ್ತ್ರ)" ಎಂದು ನಮೂದಿಸಿರುವುದನ್ನು "ಉಪನ್ಯಾಸಕರು (ಇ&ಇ)" ಎಂದು ಎರಡನೇ ಪಟ್ಟಿಯ ಕ್ರಮ ಸಂಖ್ಯೆ 4 ರಲ್ಲಿ "ದೈಹಿಕ ಶಿಕ್ಷಣ ನಿರ್ದೇಶಕರು (ಎಐಸಿಟಿಇ ವೇತನ ಶ್ರೇಣಿ) ಎಂದು ನಮೂದಿಸಿರುವುದನ್ನು "ಗ್ರಂಥಪಾಲಕರು (ಎಐಸಿಟಿಇ ವೇತನ ಶ್ರೇಣಿ)" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ನಾಗರಾಜ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

ಪಿ.ಆರ್.647

**ಶಿಕ್ಷಣ ಸಚಿವಾಲಯ**

**ವಿಷಯ :** ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ದುರಸ್ತಿ ಹಾಗೂ ಕಟ್ಟಡ ನಿರ್ಮಾಣಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ : ಯೋ8 : ದು.ಶಾ.ಪ.ಪ್ರ : 15:2009–10, ದಿನಾಂಕ 19–08–2009.
2. ಸರ್ಕಾರದ ಆದೇಶ ಸಂಖ್ಯೆ : ಇಡಿ 216 ಯೋಸಕ 2009, ದಿನಾಂಕ 17–11–2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರು, ರಾಜ್ಯದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ದುರಸ್ತಿಗಾಗಿ ಕ್ರಮವಾಗಿ 6025.74 ಲಕ್ಷ ಹಾಗೂ 2045.25 ಲಕ್ಷ ಹೀಗೆ ಒಟ್ಟು 8070.99 ಲಕ್ಷ ರೂ.ಗಳ ಅವಶ್ಯಕತೆ ಇದ್ದು ಅದನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಲೆಕ್ಕ ಶೀರ್ಷಿಕೆ 2202–01–053–0–01–200 (ಯೋಜನೇತರ) ದಡಿ ಒದಗಿಸಿರುವ 1169.85 ಲಕ್ಷ ರೂ.ಗಳಲ್ಲಿ 775.90 ಲಕ್ಷ ರೂ.ಗಳನ್ನು (ಏಳುನೂರಾ ಎಪ್ಪತ್ತೈದು ಲಕ್ಷದ ತೊಂಭತ್ತು ಸಾವಿರ ರೂಪಾಯಿಗಳು ಮಾತ್ರ) ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ನಿರ್ಮಾಣ ಮತ್ತು ದುರಸ್ತಿಗಾಗಿ ಬಿಡುಗಡೆ ಮಾಡಲಾಗಿದೆ.

ಉಳಿಕೆ 374.00 ಲಕ್ಷ ರೂಪಾಯಿಗಳನ್ನು ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 216 ಯೋಸಕ 2009, ಬೆಂಗಳೂರು, ದಿನಾಂಕ 25ನೇ ಫೆಬ್ರವರಿ 2010**

**(ಇಡಿ : 31 ಸ್ಕೀಮರ (ಯುನಿಕ್) 2009, ದಿನಾಂಕ 25ನೇ ಫೆಬ್ರವರಿ 2010**

2009–10 ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202–01–053–0–01–200 (ಯೋಜನೇತರ) ದಡಿ ಒದಗಿಸಿರುವ 1169.85 ಲಕ್ಷ ರೂ.ಗಳಲ್ಲಿ 374.00 ಲಕ್ಷ ರೂ.ಗಳನ್ನು (ಮುನ್ನೂರಾಎಪ್ಪತ್ತ ನಾಲ್ಕು ಲಕ್ಷ ರೂಪಾಯಿಗಳು ಮಾತ್ರ) ಅನುಬಂಧದಲ್ಲಿ ತೋರಿಸಿರುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ನಿರ್ಮಾಣಕ್ಕಾಗಿ ಈ ಕೆಳಕಂಡ ಷರತ್ತನ್ನು ವಿಧಿಸಿ ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

ಷರತ್ತುಗಳು :

1. ಎಲ್ಲಾ ಕಾಮಗಾರಿಗಳನ್ನು ಎಸ್.ಡಿ.ಎಂ.ಸಿ. ಮೂಲಕ ಕೈಗೊಳ್ಳತಕ್ಕದ್ದು.
2. ಜಿಲ್ಲಾ ಪಂಚಾಯತವು ಅನುದಾನವನ್ನು ನೇರವಾಗಿ ಸಂಬಂಧಿಸಿದ ಜಿಲ್ಲೆಗಳ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರುಗಳಿಗೆ ಬಿಡುಗಡೆ ಮಾಡತಕ್ಕದ್ದು.
3. ಆಯಾ ಜಿಲ್ಲೆಯ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆರವರು ಬಿಡುಗಡೆ ಮಾಡಿದ ಮೊತ್ತವನ್ನು ಪೇಯಿಸ್ ರಸೀದಿ ಮೂಲಕ ಸೆಳೆದು ಸಂಬಂಧಿಸಿದ ಶಾಲೆಗಳ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳಿಗೆ ನೇರವಾಗಿ ಬಿಡುಗಡೆ ಮಾಡತಕ್ಕದ್ದು.
4. ತಾಂತ್ರಿಕ ಮಾರ್ಗದರ್ಶನವನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ನೀಡಬೇಕು. ಪ್ರಾಥಮಿಕ ಶಾಲಾ ಕಟ್ಟಡದ ನಿರ್ಮಾಣ ಅನುದಾನ ಪ್ರತಿ ಕೋಣೆಗೆ ರೂ.4.00 ಲಕ್ಷವಿದ್ದು ಈ ಮೊತ್ತದಲ್ಲಿ ರೂ. 3.80 ಲಕ್ಷವನ್ನು ನಿರ್ಮಾಣ ಕಾಮಗಾರಿಗೂ ರೂ. 0.20 ಲಕ್ಷ ಮೊತ್ತವನ್ನು ಪೀಠೋಪಕರಣಗಳಿಗಾಗಿ ಬಳಸತಕ್ಕದ್ದು.
5. ಪ್ರೌಢಶಾಲಾ ಕಟ್ಟಡಕ್ಕೆ ಪ್ರತಿ ಕೋಣೆಗೆ ರೂ. 5.80 ಲಕ್ಷ ನಿಗದಿಪಡಿಸಲಾಗಿದ್ದು ನಿರ್ಮಾಣಕ್ಕೆ ರೂ. 5.40 ಲಕ್ಷ ಬಳಸಿ ಉಳಿದ ರೂ.0.40 ಲಕ್ಷ ಮೊತ್ತವನ್ನು ಪೀಠೋಪಕರಣಗಳಿಗಾಗಿ ಬಳಸತಕ್ಕದ್ದು.
6. ಕೋಣೆಗಳನ್ನು ಒಂದಕ್ಕೊಂದು ಹೊಂದಿಕೊಂಡಂತೆ ಕಟ್ಟಿದಾಗ ಆಗುವ ಉಳಿತಾಯದ ಮೊತ್ತ ಅಥವಾ ಮೊದಲ ಮಾಳಿಗೆಯಲ್ಲಿ ಕಟ್ಟಿದಾಗ ಆಗುವ ಪಾಯ ನಿರ್ಮಾಣದ ಉಳಿತಾಯ ಮೊತ್ತವನ್ನು ಶಾಲಾ ಕಟ್ಟಡಕ್ಕೆ ನೀರು ಪೂರೈಕೆ, ಶೌಚಾಲಯ ನಿರ್ಮಾಣ, ಆವರಣ ಗೋಡೆ ನಿರ್ಮಾಣ ಇಂಥ ಉದ್ದೇಶಗಳಿಗಾಗಿ ಬಳಸಿಕೊಳ್ಳುವುದು. ಇತರ ಅಭಿವೃದ್ಧಿ ಕೆಲಸಗಳಿಗೆ ಬಳಸುವುದಾದಲ್ಲಿ ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಅನುಮತಿ ಪಡೆಯತಕ್ಕದ್ದು.
7. ಪ್ರಾಥಮಿಕ ಶಾಲಾ ಕಟ್ಟಡಗಳನ್ನು ಆರ್‌ಸಿಸಿ ಕಂಬ ಹಾಗೂ ಛಾವಣಿ ಅಳವಡಿಸಿ ಇತ್ತೀಚಿನ ಸರ್ವ ಶಿಕ್ಷಾ ಅಭಿಯಾನ ಕಟ್ಟಡದ ವಿನ್ಯಾಸದಂತೆ ನಿರ್ಮಿಸುವುದು.
8. ಪ್ರೌಢ ಶಾಲಾ ಕಟ್ಟಡಗಳನ್ನು ಆರ್.ಸಿ.ಸಿ. ಕಂಬ ಹಾಗೂ ಛಾವಣಿ ಅಳವಡಿಸಿ ನಬಾರ್ಡ್ ಯೋಜನೆ ಅಡಿಯಲ್ಲಿ ನಿರ್ಮಿಸಲಾದ ಕಟ್ಟಡದ ವಿನ್ಯಾಸದಂತೆ ನಿರ್ಮಿಸತಕ್ಕದ್ದು.
9. ಸದರಿ ಮೊತ್ತವನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪ ನಿರ್ದೇಶಕರ ಕಛೇರಿಯ ಗೆಜೆಟೆಡ್ ಸಹಾಯಕರು ಪೇಯೀಸ್ ರಸೀದಿ ಮೂಲಕ ಸೆಳೆದು ಎಸ್.ಡಿ.ಎಂ.ಸಿ.ಗಳಿಗೆ ನೀಡತಕ್ಕದ್ದು.
10. ಖರೀದಿಗಳಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಎಲ್ಲಾ ಖರೀದಿ ನಿಯಮಗಳನ್ನು ಚಾಚೂ ತಪ್ಪದೇ ಪಾಲಿಸುವಂತೆ ಸೂಚಿಸಿದೆ.
11. ಕಾಮಗಾರಿಗಳ ಪರಿಶೀಲನೆಯನ್ನು ಆಗಿಂದಾಗ್ಗೆ ಸಂಬಂಧಿಸಿದ ಜಿಲ್ಲೆಗಳ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ತಾಲ್ಲೂಕುಗಳಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ನಿರ್ವಹಿಸಿ ವರದಿಯನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೆ ವರದಿ ನೀಡತಕ್ಕದ್ದು.
12. ಅನುದಾನವನ್ನು ಒಟ್ಟಿಗೆ ಬಿಡುಗಡೆ ಮಾಡದೇ ಕಾಮಗಾರಿಗಳ ಪ್ರಗತಿಯನ್ನು ಆಧರಿಸಿ ಹಂತ ಹಂತವಾಗಿ ಬಿಡುಗಡೆ ಮಾಡತಕ್ಕದ್ದು.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ ಶಿಇ 2168 ಐಎಫ್ (ಬಿ&ಎ) 2009, ದಿನಾಂಕ 03–09–2009 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ,**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಯೋಜನೆ).

**ಸರ್ಕಾರದ ಆದೇಶ ಸಂಖ್ಯೆ : ಇಡಿ 216 ಯೋಸಕ 2009, ಬೆಂಗಳೂರು, ದಿನಾಂಕ 25ನೇ ಫೆಬ್ರವರಿ 2010**

**[ಇಡಿ : 31 ಸ್ಕೀಮರ (ಯುನಿಕ್) 2009, ದಿನಾಂಕ 25ನೇ ಫೆಬ್ರವರಿ 2010] ಕ್ಕೆ ಅನುಬಂಧ**

| ಜಿಲ್ಲೆ : ದಾವಣಗೆರೆ | | | | |
|---|---|---|---|---|
| ಕ್ರ. ಸಂ. | ತಾಲ್ಲೂಕಿನ ಹೆಸರು | ಶಾಲೆಯ ಹೆಸರು | ಕೊಠಡಿಗಳ ಸಂಖ್ಯೆ | ಮೊತ್ತ (ರೂ. ಲಕ್ಷಗಳಲ್ಲಿ) |
| 1. | ದಾವಣಗೆರೆ | ಮೋತಿ ವೀರಪ್ಪ ಸ.ಪ.ಪೂ. ಕಾಲೇಜು, (ಪ್ರೌಢ ಶಾಲಾ ವಿಭಾಗ) | 3 | 17.25 |
| 2. | | ಬಾಲಕರ ಸ.ಪ.ಪೂ. ಕಾಲೇಜು, ದಾವಣಗೆರೆ | 3 | 17.25 |
| 3. | ಹರಿಹರ | ಸರ್ಕಾರಿ ಪ್ರೌಢಶಾಲೆ, ಕುಂಬಳೂರು | 1 | 5.80 |
| 4. | | ಸರ್ಕಾರಿ ಪ್ರೌಢಶಾಲೆ, ಹೊಳಸಿರಿಗೆರೆ | 1 | 5.80 |
| ಜಿಲ್ಲೆ : ಉತ್ತರ ಕನ್ನಡ | | | | |
| 5. | ಭಟ್ಕಳ | ಸರ್ಕಾರಿ ಪ್ರೌಢಶಾಲೆ, ಕುಂಟವಾಣಿ | 2 | 11.60 |
| 6. | | ಸರ್ಕಾರಿ ಪ್ರೌಢಶಾಲೆ, ಬೈಲೂರು | 2 | 11.60 |
| 7. | ಶಿರಸಿ | ಸರ್ಕಾರಿ ಪ್ರೌಢಶಾಲೆ, ಗಣೇಶನಗರ | 2 | 11.60 |
| 8. | ಸಿದ್ದಾಪುರ | ಸರ್ಕಾರಿ ಪ್ರೌಢಶಾಲೆ, ವಂದಾನೆ | 2 | 11.60 |
| 9. | ಮುಂಡಗೋಡ | ಸರ್ಕಾರಿ ಉರ್ದು ಪ್ರೌಢಶಾಲೆ, ಪಾಳಾ | 2 | 11.60 |
| 10. | ಯಲ್ಲಾಪುರ | ಸರ್ಕಾರಿ ಪ್ರೌಢಶಾಲೆ, ಉಮ್ಮಚಗಿ | 2 | 11.60 |
| 11. | ಹಳಿಯಾಳ | ಸರ್ಕಾರಿ ಪ್ರೌಢಶಾಲೆ, ಬೆಳವಟಗಿ | 2 | 11.60 |
| 12. | ಕಾರವಾರ | ಸರ್ಕಾರಿ ಪ್ರೌಢಶಾಲೆ, ತೋಡೂರು | 2 | 11.60 |
| 13. | ಕುಮಟಾ | ಸರ್ಕಾರಿ ಪ್ರೌಢಶಾಲೆ, ಸಂತೆಗುಳಿ | 2 | 11.60 |
| 14. | ಹೊನ್ನಾವರ | ಸರ್ಕಾರಿ ಪ್ರೌಢಶಾಲೆ, ಗೇರುಸೊಪ್ಪ | 2 | 11.60 |
| ಜಿಲ್ಲೆ : ತುಮಕೂರು | | | | |
| 15. | ತಿಪಟೂರು | ಬಾ.ಸ.ಪ.ಪೂ. ಕಾಲೇಜು, ತಿಪಟೂರು | 2 | 11.60 |
| 16. | | ಸರ್ಕಾರಿ ಪ್ರೌಢಶಾಲೆ, ಹಳೇಪಾಳ್ಯ | 2 | 11.60 |
| ಜಿಲ್ಲೆ : ಬಾಗಲಕೋಟೆ | | | | |
| 17. | ಜಮಖಂಡಿ | ಸರ್ಕಾರಿ ಉರ್ದು ಪ್ರೌಢಶಾಲೆ, ಹನಗಂಡಿ | 2 | 11.60 |
| 18. | | ಸರ್ಕಾರಿ ಪ್ರೌಢಶಾಲೆ, ಆಸಂಗಿ | 2 | 11.60 |
| ಜಿಲ್ಲೆ : ಚಾಮರಾಜನಗರ | | | | |
| 19. | ಕೊಳ್ಳೇಗಾಲ | ಸರ್ಕಾರಿ ಪ್ರೌಢಶಾಲೆ, ಎಲೆಮಾಳ | 2 | 11.60 |
| 20. | | ಸರ್ಕಾರಿ ಪ್ರೌಢಶಾಲೆ, ದೊಡ್ಡಿಂದುವಾಡಿ | 2 | 11.60 |
| 21. | | ಸರ್ಕಾರಿ ಪ್ರೌಢಶಾಲೆ, ಮಂಗಲ | 2 | 11.60 |
| ಜಿಲ್ಲೆ : ಕೊಪ್ಪಳ | | | | |
| 22. | ಕೊಪ್ಪಳ | ಸರ್ಕಾರಿ ಪ್ರೌಢಶಾಲೆ, ಕರ್ಕಿಹಳ್ಳಿ | 2 | 11.60 |
| ಜಿಲ್ಲೆ : ಧಾರವಾಡ | | | | |
| 23. | ನವಲಗುಂದ | ಸರ್ಕಾರಿ ಪ್ರೌಢಶಾಲೆ, ದಾಟನಾಳ | 2 | 11.60 |

| | | | | |
|---|---|---|---|---|
| | | **ಜಿಲ್ಲೆ : ಬೆಳಗಾವಿ** | | |
| 24. | ಖಾನಾಪುರ | ಸರ್ಕಾರಿ ಪ್ರೌಢಶಾಲೆ, ಶಿರೋಲಿ | 2 | 11.60 |
| | | **ಜಿಲ್ಲೆ : ಗದಗ** | | |
| 25. | ಗದಗ | ಸರ್ಕಾರಿ ಪ್ರೌಢಶಾಲೆ, ಲಕ್ಕುಂಡಿ | 2 | 11.60 |
| | | **ಜಿಲ್ಲೆ : ಬಿಜಾಪುರ** | | |
| 26. | ಬಿಜಾಪುರ | ಸರ್ಕಾರಿ ಪ್ರೌಢಶಾಲೆ, ದ್ಯಾಬೇರಿ | 2 | 11.60 |
| | | **ಜಿಲ್ಲೆ : ಕೋಲಾರ** | | |
| 27. | ಚಿಕ್ಕಬಳ್ಳಾಪುರ | ಸ.ಪ.ಪೂ. ಕಾಲೇಜು, (ಪ್ರೌಢ ಶಾಲಾ ವಿಭಾಗ) ಮಂಡಿಕಲ್ | 2 | 11.50 |
| | | **ಪ್ರೌಢ ಶಾಲೆ ಒಟ್ಟು** | **54** | **312.80** |
| | | **ಪ್ರಾಥಮಿಕ ಶಾಲಾ ಕೊಠಡಿ ನಿರ್ಮಾಣ** | | |
| | | **ಜಿಲ್ಲೆ : ಯಾದಗಿರಿ** | | |
| 1. | ಶಹಾಪುರ | ಸ.ಹಿ.ಪ್ರಾ. ಶಾಲೆ, ಶಾಂಪೂರ ಹಳ್ಳಿ ತಾಂಡ | 4 | 16.00 |
| | | **ಜಿಲ್ಲೆ : ಉತ್ತರ ಕನ್ನಡ** | | |
| 2. | ಕುಮಟಾ | ಸ.ಹಿ.ಪ್ರಾ. ಶಾಲೆ, ಹೊಲನಗದ್ದೆ | 1 | 4.20 |
| 3. | ಹೊನ್ನಾವರ | ಸ.ಹಿ.ಪ್ರಾ. ಶಾಲೆ, ಗುಡ್ಡೇಬಾಳ | 1 | 4.20 |
| | | **ಜಿಲ್ಲೆ : ಮಂಡ್ಯ** | | |
| 4. | ಕೆ.ಆರ್. ಪುರ | ಸ.ಹಿ.ಪ್ರಾ. ಶಾಲೆ, ಬೂಕನಕೆರೆ | 5 | 20.00 |
| | | **ಜಿಲ್ಲೆ : ಚಿಕ್ಕೋಡಿ** | | |
| 5. | ಹುಕ್ಕೇರಿ | ಸ.ಹಿ.ಪ್ರಾ. ಶಾಲೆ, ದಡ್ಡಿ | 2. | 8.40 |
| 6. | | ಸ.ಹಿ.ಪ್ರಾ. ಶಾಲೆ, ಯಮಕನಕರಡಿ | 2 | 8.40 |
| | | **ಪ್ರಾಥಮಿಕ ಶಾಲೆ ಒಟ್ಟು** | **15** | **61.20** |

**ಐ.ಎಫ್. ಮಾಗಿ,**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ).

ಪಿ.ಆರ್.648

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇವರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 74 ಸ್ವೀಮರ 2009, ದಿನಾಂಕ 18–05–2009.
2. ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 84 ಕಸನಿ 2009, ದಿನಾಂಕ 04–08–2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 18–05–2009ರ ಸರ್ಕಾರದ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯವ್ಯಯ ಲೆಕ್ಕಶೀರ್ಷಿಕೆ "2205–00–800–0–09–059 (ಇತರೆ ಖರ್ಚು) ಯೋಜನೆ" ಯಡಿ ರೂ. 100.00 ಲಕ್ಷಗಳ ಅನುದಾನ ಕಲ್ಪಿಸಿಕೊಳ್ಳಲಾಗಿದೆ. ಸದರಿ ಮೊತ್ತ ರೂ.100.00 ಲಕ್ಷಗಳಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇದರ ವೆಚ್ಚಗಳನ್ನು ಭರಿಸಲು ದಿನಾಂಕ 01–04–2009 ರಿಂದ 31–07–2009ರ ಅವಧಿಗೆ ರೂ.33.00 ಲಕ್ಷಗಳ ಅನುದಾನವನ್ನು ಹಂಚಿಕೆ ಮಾಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ 04–08–2009 ರ ಸರ್ಕಾರಿ ಆದೇಶದಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇವರ ದಿನಾಂಕ 01–04–2009 ರಿಂದ 31–07–2009 ರವರೆಗಿನ ವೆಚ್ಚಗಳನ್ನು ಭರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಲೆಕ್ಕ ಶೀರ್ಷಿಕೆ 2205–00–800–0–09–059 (ಇತರೆ ಖರ್ಚು) (ಯೋಜನೆ) ಅಡಿಯಲ್ಲಿ ಒದಗಿಸಿರುವ ರೂ.100.00 ಲಕ್ಷಗಳಲ್ಲಿ ರೂ.33.00 ಲಕ್ಷಗಳನ್ನು (ರೂಪಾಯಿ ಮೂವತ್ತ ಮೂರು ಲಕ್ಷಗಳು ಮಾತ್ರ) ಆಡಳಿತ ಇಲಾಖೆಯಾದ ಸಿಆಸು ಇಲಾಖೆಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಅನುಮತಿ ನೀಡಲಾಗಿತ್ತು.

ಅನಿವಾಸಿ ಭಾರತೀಯ ಸಮಿತಿಗೆ 2009–10ನೇ ಸಾಲಿಗೆ ಒದಗಿಸಿರುವ ಅನುದಾನವು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಬೇಡಿಕೆಗೆ ಸೇರಿದೆ. ಆದುದರಿಂದ ಸದರಿ ಸಮಿತಿಗೆ ಅನುದಾನವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯೇ ಬಿಡುಗಡೆ ಮಾಡಬೇಕಾಗಿದ್ದು, ಈಗಾಗಲೇ ದಿನಾಂಕ 15–04–2009 ರಂದು ಹಾಗೂ ದಿನಾಂಕ 11.08.2009 ರಂದು ಕ್ರಮವಾಗಿ ರೂ.33.00 ಲಕ್ಷ ಹಾಗೂ ರೂ.67.00 ಲಕ್ಷಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಬಿಡುಗಡೆ ಮಾಡಿರುವುದರಿಂದ ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ರದ್ದುಪಡಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 84 ಕಸನಿ 2009, ಬೆಂಗಳೂರು, ದಿನಾಂಕ 2ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇವರಿಗೆ 2009–10ನೇ ಸಾಲಿಗೆ ಒದಗಿಸಿದ ರೂ.100.00 ಲಕ್ಷಗಳಲ್ಲಿ ರೂ.33.00 ಲಕ್ಷಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಅನುಮತಿ ನೀಡಿ ಹೊರಡಿಸಲಾದ ದಿನಾಂಕ 04–08–2009 ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 84 ಕಸನಿ 2009 ನ್ನು ಅಂದಿನಿಂದಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಈ ಆದೇಶವನ್ನು ದಿನಾಂಕ 09–02–2010 ರ ಟಿಪ್ಪಣಿ ಸಂಖ್ಯೆ ಆಇ 21 ವೆಚ್ಚ–7/2010 ರಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

ಪಿ.ಆರ್.649

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ :** ರಾಜ್ಯದಲ್ಲಿರುವ ಅಲೆಮಾರಿ ಜನಾಂಗದವರಿಗೆ ಸೌಲಭ್ಯ ಹಾಗೂ ಮೀಸಲಾತಿ ಕಲ್ಪಿಸುವಲ್ಲಿ ರಾಜ್ಯ ಮತ್ತು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಸಲಹಾ ಸಮಿತಿಯ ಅವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ ಸಕಇ 127 ಬಿಸಿಎ 2005, ಬೆಂಗಳೂರು, ದಿನಾಂಕ 05–06–2006.
2. ಪತ್ರ ಸಂಖ್ಯೆ ಹಿಂವಕನಿ/ಅಮಾಜ–1/ಸಿಆರ್–40/2009–10, ದಿನಾಂಕ 16–01–2010, ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಂದ

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 05–06–2006ರ ಸರ್ಕಾರದ ಆದೇಶದಲ್ಲಿ ರಾಜ್ಯದ ಅಲೆಮಾರಿ ಜನಾಂಗದವರಿಗೆ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಹಾಗೂ ರಾಜ್ಯ ಮಾನವ ಹಕ್ಕುಗಳ ಆಯೋಗದ ಶಿಫಾರಸ್ಸಿನ ಅನುಸಾರ, ರಾಜ್ಯದ ಅಲೆಮಾರಿ ಜನಾಂಗದವರಿಗೆ ಮೀಸಲಾತಿ ಸೌಲಭ್ಯ ಹಾಗೂ ಕೇಂದ್ರ ಸರ್ಕಾರದ ಆರ್ಥಿಕ ನೆರವಿನೊಂದಿಗೆ ಅಲೆಮಾರಿ ಜನಾಂಗದ ಕಲ್ಯಾಣ ಕಾರ್ಯಕ್ರಮಗಳನ್ನು ಜಾರಿಗೊಳಿಸಲು, ಗ್ರಾಮೀಣ ಪ್ರದೇಶದಲ್ಲಿರುವ ಅಲೆಮಾರಿ ಜನಾಂಗದವರ ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಮತ್ತು ರಾಜಕೀಯ ಸಮಾನ ಅವಕಾಶ ಕಲ್ಪಿಸಲು ಸಹಕಾರಿಯಾಗುವಂತೆ ದಿನಾಂಕ 05.06.2000 ರಿಂದ ಅನ್ವಯವಾಗುವಂತೆ ಮೂರು ವರ್ಷಗಳ ಅವಧಿಗೆ ರಾಜ್ಯ ಮತ್ತು ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಅಲೆಮಾರಿ ಜನಾಂಗದವರ ಸಲಹಾ ಸಮಿತಿಯನ್ನು ರಚಿಸಲಾಗಿತ್ತು.

ಮೇಲೆ ಉಲ್ಲೇಖ 2ರಲ್ಲಿ ಓದಲಾದ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಯುಕ್ತರು ತಮ್ಮ ದಿನಾಂಕ 16.01.2010 ರ ಪತ್ರದಲ್ಲಿ ರಾಜ್ಯ ಮತ್ತು ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಅಲೆಮಾರಿ ಜನಾಂಗದವರ ಸಲಹಾ ಸಮಿತಿಯನ್ನು

ನೇಮಕ ಮಾಡಿ ದಿನಾಂಕ 05–06–2009 ನೇ ಸಾಲಿಗೆ ಮೂರು ವರ್ಷಗಳ ಅವಧಿಯಾಗಿದ್ದು ಸದರಿ ಸಮಿತಿಯ ಅವಧಿ ಮೂರು ವರ್ಷಗಳು ಮುಗಿದಿರುವುದರಿಂದ ದಿನಾಂಕ 05–06–2009 ರಿಂದ ಅನ್ವಯವಾಗುವಂತೆ ಮೂರು ವರ್ಷಗಳ ಅವಧಿಗೆ ವಿಸ್ತರಣೆ ಮಾಡಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 30 ಬಿಸಿಎ 2010, ಬೆಂಗಳೂರು, ದಿನಾಂಕ 24ನೇ ಫೆಬ್ರವರಿ 2010**

ಸರ್ಕಾರದ ಆದೇಶ ಸಂಖ್ಯೆ : ಸಕಇ 127 ಬಿಸಿಎ 2005, ದಿನಾಂಕ 05–06–2006 ರಲ್ಲಿ ರಚಿಸಲಾಗಿದ್ದ ರಾಜ್ಯ ಮತ್ತು ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಅಲೆಮಾರಿ ಜನಾಂಗದವರ ಸಲಹಾ ಸಮಿತಿಯನ್ನು ದಿನಾಂಕ 05–06–2009 ರಿಂದ ಅನ್ವಯವಾಗುವಂತೆ ಮೂರು ವರ್ಷಗಳ ಅವಧಿಗೆ ವಿಸ್ತರಣೆ ಮಾಡಿ ಸರ್ಕಾರವು ಆದೇಶಿಸಿದೆ. ಉಳಿದಂತೆ ದಿನಾಂಕ 05.06.2006 ರ ಆದೇಶದಲ್ಲಿರುವ ನಿಬಂಧನೆ ಮತ್ತು ಷರತ್ತುಗಳು ಮುಂದುವರೆದ ಅವಧಿಗೂ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಬಾಟೆ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್.650 ಸಮಾಜ ಕಲ್ಯಾಣ ಇಲಾಖೆ.

**ಕಂದಾಯ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ : ಕಂಇ 35 ಮುಅಬಿ 2010, ಬೆಂಗಳೂರು, ದಿನಾಂಕ 01–03–2010**

ಸರ್ಕಾರಿ ಆದೇಶ ಸಂಖ್ಯೆ : ಕಂಇ 35 ಮುಅಬಿ 2010 ದಿನಾಂಕ 05–02–2010 ರಲ್ಲಿ ಓದಲಾಗಿದೆ : (1)ರ ನಂತರ "(2)ರಲ್ಲಿ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 261 ಬಿಆರ್‌ಎಸ್ 2009, ದಿನಾಂಕ 05–02–2010" ಎಂದು ಸೇರ್ಪಡಿಸಿ ಓದಿಕೊಳ್ಳತಕ್ಕದ್ದು.

ನಂತರ ಸರ್ಕಾರಿ ಆದೇಶ ಸಂಖ್ಯೆ : ಕಂಇ 35 ಮುಅಬಿ 2010 ದಿನಾಂಕ 05–02–2010 ರ ಪ್ರಸ್ತಾವನೆಯ ಕಂಡಿಕೆ–2ರ 3ನೇ ಸಾಲಿನಲ್ಲಿ "ನಿರ್ವಹಣೆ (ಯೋಜನೇತರ) ರಡಿಯಲ್ಲಿ ಅನುದಾನ ಒದಗಿಸಲಾಗಿದ್ದು" ಎಂಬ ಪದದ ಬದಲಾಗಿ "ನಿರ್ವಹಣೆ (ಯೋಜನೇತರ) ರಡಿಯಲ್ಲಿ ಹೆಚ್ಚುವರಿಯಾಗಿ ಅನುದಾನ ಒದಗಿಸಲಾಗಿದ್ದು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಹಾಗೂ ಆದೇಶ ಭಾಗದ ಕಂಡಿಕೆ–1ರ 3ನೇ ಸಾಲಿನಲ್ಲಿ "ಇತರೆ ಧಾರ್ಮಿಕ ಸಂಸ್ಥೆಗಳು–200–ನಿರ್ವಹಣೆ (ಯೋಜನೇತರ) ರಡಿಯಲ್ಲಿ ಒದಗಿಸಲಾದ ಅನುದಾನದಲ್ಲಿ ಪ್ರಸ್ತುತ ವರ್ಷದಲ್ಲಿ ರೂ.2.00 ಕೋಟಿ (ಎರಡು ಕೋಟಿಗಳು ಮಾತ್ರ)ಗಳ" ಎಂಬ ಪದಗಳ ಬದಲಾಗಿ "ಇತರೆ ಧಾರ್ಮಿಕ ಸಂಸ್ಥೆಗಳು–200–ನಿರ್ವಹಣೆ (ಯೋಜನೇತರ) ರಡಿಯಲ್ಲಿ ಒದಗಿಸಲಾದ ಹೆಚ್ಚುವರಿ ಅನುದಾನದ ರೂ.2.00 ಕೋಟಿ (ಎರಡು ಕೋಟಿಗಳು ಮಾತ್ರಗಳ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ರಾಮಚಂದ್ರಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್.651 ಕಂದಾಯ ಇಲಾಖೆ (ಮುಜರಾಯಿ).

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಬಿ.ಡಿ. ಶ್ರೀಶೈಲ, ಹಿಂದಿನ ತಹಶೀಲ್ದಾರ್ (ಹಾಲಿ ನಿವೃತ್ತರು) ಚಾಮರಾಜನಗರ ತಾಲ್ಲೂಕು ಹಾಗೂ ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಕುರಿತು – ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರ ಪತ್ರ ಸಂ. ಸಿಬ್ಬಂದಿ (2) : ಸಿಸಿಎ : 6/02–03, ದಿನಾಂಕ 8–1–03, 11–04–2003 ಮತ್ತು 16–06–2003.
2. ಸರ್ಕಾರದ ಆದೇಶ ಸಂ : ಆರ್‌ಡಿ 10 ಎಡಿಇ 2003, ದಿನಾಂಕ 19–07–2003.
3. ಅಧಿಕಾರಿ/ನೌಕರರಿಗೆ ಜಾರಿ ಮಾಡಲಾಗಿದ್ದ ಕಾರಣ ಕೇಳುವ ನೋಟೀಸು ದಿನಾಂಕ 19–12–2003.

4. **ಅಧಿಕಾರಿ/ನೌಕರರ ಲಿಖಿತ ಹೇಳಿಕೆ :**
   a) ಶ್ರೀ ಬಿ.ಡಿ. ಶ್ರೀಶೈಲ, ಹಿಂದಿನ ತಹಶೀಲ್ದಾರ (ಹಾಲಿ ನಿವೃತ್ತರು) ದಿನಾಂಕ 22–12–2003.
   b) ಶ್ರೀ ಎಂ. ವೆಂಕಟಪ್ಪ, ಶಿರಸ್ತೇದಾರ್, ದಿನಾಂಕ 26–02–2004.
   c) ಶ್ರೀ ಕೆ. ಸಿದ್ದಪ್ಪ, ಶಿರಸ್ತೇದಾರ್, ದಿನಾಂಕ 19–02–2004.
   d) ಶ್ರೀ ಕೆ.ವಿ. ನಾಗರಾಜು, ಪ್ರ.ದ.ಸ. ದಿನಾಂಕ 01–03–2004.
   e) ಶ್ರೀ ಬೆಳ್ಳೇಗೌಡ, ರಾಜಸ್ವ ನಿರೀಕ್ಷಕರು, ದಿನಾಂಕ 30–01–2004.
   f) ಶ್ರೀ ಜಿ.ಪಿ. ಸತೀಶ್, ಗ್ರಾಮಲೆಕ್ಕಿಗ, ದಿನಾಂಕ 23–01–2004.
   g) ಶ್ರೀ ಮೊಹಮ್ಮದ್ ಇಕ್ಬಾಲ್ ಅಹಮ್ಮದ್, ದ್ವಿ.ದ.ಸ. ದಿನಾಂಕ 08–03–2004.
   h) ಶ್ರೀ ಸುಬ್ಬಣ್ಣ, 'ಡಿ' ಗ್ರೂಪ್ ನೌಕರ, ದಿನಾಂಕ 29–01–2004.
5. ಸರ್ಕಾರದ ಆದೇಶ ಸಂ : ಆರ್‌ಡಿ 10 ಎಡಿಇ 2003, ದಿನಾಂಕ 23–06–04
6. ಸರ್ಕಾರದ ಆದೇಶ ಸಂ : ಆರ್‌ಡಿ 10 ಎಡಿಇ 2003, ದಿನಾಂಕ 25–01–05
7. ವಿಚಾರಣಾಧಿಕಾರಿಗಳ ವರದಿ, ದಿನಾಂಕ 02–06–2005.
8. 2ನೇ ಕಾರಣ ಕೇಳುವ ನೋಟೀಸು, ದಿನಾಂಕ 12–09–05.
9. ಅಧಿಕಾರಿ/ನೌಕರರ ಎರಡನೇ ಕಾರಣ ಕೇಳುವ ನೋಟೀಸಿಗೆ ಹೇಳಿಕೆ :
   ಅ) ಶ್ರೀ ಬಿ.ಡಿ. ಶ್ರೀಶೈಲ, ನಿವೃತ್ತ ತಹಶೀಲ್ದಾರ್, ದಿನಾಂಕ 24-6-09.
   ಆ) ಶ್ರೀ ಕೆ.ವಿ. ನಾಗರಾಜು, ಪ್ರ.ದ.ಸ. ದಿನಾಂಕ 24-6-09.
   ಇ) ಶ್ರೀ ಜಿ.ಪಿ. ಸತೀಶ್, ಗ್ರಾ.ಲೆ., ದಿನಾಂಕ 24-6-09.
   ಈ) ಶ್ರೀ ಎಂ. ವೆಂಕಟಪ್ಪ, ಶಿರಸ್ತೇದಾರ್, ದಿನಾಂಕ 04–03–09.
10. ಸರ್ಕಾರದ ಪತ್ರ ಸಂ : ಆರ್‌ಡಿ 10 ಎಡಿಇ 2003, ದಿನಾಂಕ 05–09–2006 ಮತ್ತು 02.06.2007.
11. ಸರ್ಕಾರದ ಪತ್ರ ಸಂ : ಆರ್‌ಡಿ 10 ಎಡಿಇ 2003, ದಿನಾಂಕ 22–08–2008.
12. ಕರ್ನಾಟಕ ಲೋಕಸೇವಾ ಆಯೋಗ ಪತ್ರ ಸಂ : PSC/95/CNS/06, Dt. 12-01-09.
13. ಸರ್ಕಾರದ ಪತ್ರ ಸಂ : ಕಂಇ 10 ಎಡಿಇ 2003, ದಿನಾಂಕ 28–10–2009
14. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ : ಪಿಎಸ್‌ಸಿ 95, ಸಿಎನ್‌ಎಫ್ 07, ದಿನಾಂಕ 30.01.2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ 08–01–2003 ರಲ್ಲಿ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಇವರು ಶ್ರೀ ಬಿ.ಡಿ. ಶ್ರೀಶೈಲ, ಹಿಂದಿನ ತಹಶೀಲ್ದಾರ (ಹಾಲಿ ನಿವೃತ್ತರು) ಚಾಮರಾಜನಗರ ತಾಲ್ಲೂಕು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಸದರಿ ತಾಲ್ಲೂಕಿನ ಚಂದಕವಾಡಿ ಹೋಬಳಿಯ ಜ್ಯೋತಿಗೌಡನಪುರ ಗ್ರಾಮದ ಸ.ನಂ.184ರ ಸರ್ಕಾರಿ ಜಮೀನಿನ ಬಗ್ಗೆ ಅಕ್ರಮವಾಗಿ ಅಧಿಕೃತ ಜ್ಞಾಪನ ಹೊರಡಿಸಿ, ಭೂ ಕಬಳಿಕೆಯಲ್ಲಿ ಶಾಮೀಲಾಗಿದ್ದಾರೆ ಎಂಬ ಬಗ್ಗೆ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಗೊಂಡ ಹಿನ್ನಲೆಯಲ್ಲಿ, ಚಾಮರಾಜನಗರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರಿಂದ ವಿಚಾರಣೆ ಜರುಗಿಸಿ, ಅವರು ಸಲ್ಲಿಸಿರುವ ದಿನಾಂಕ 07–01–2003ರ ತನಿಖಾ ವರದಿ ಸಂ. ಆರ್‌ಆರ್‌ಟಿಸಿಆರ್ 283/2002–03 ರೊಂದಿಗೆ ಸರ್ಕಾರಕ್ಕೆ ಪ್ರಾಥಮಿಕ ವರದಿಯನ್ನು ಸಲ್ಲಿಸಿರುತ್ತಾರೆ. ನಂತರ ಸದರಿ ಜ್ಯೋತಿಗೌಡನಪುರ ಗ್ರಾಮದ ಸ.ನಂ.184ರಲ್ಲಿ ಭೂಕಬಳಿಕೆ ಅಕ್ರಮವಾಗಿ ದಾಖಲೆ ಸೃಷ್ಟಿಸಿರುವ ಅಧಿಕಾರಿ/ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ದಿನಾಂಕ 11.04.2003ರ ಪತ್ರದಲ್ಲಿ ಆರೋಪ ಪಟ್ಟಿಗಳೊಡನೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ 19–07–2003ರ ಆದೇಶದಲ್ಲಿ ಜಿಲ್ಲಾಧಿಕಾರಿಯವರ ವರದಿಯ ಹಿನ್ನೆಲೆಯಲ್ಲಿ ಶ್ರೀ ಬಿ.ಡಿ. ಶ್ರೀಶೈಲ, ಹಿಂದಿನ ತಹಶೀಲ್ದಾರ್, ಚಾಮರಾಜನಗರ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿಕೊಂಡು ಸೇವೆಯಿಂದ ಅಮಾನತ್ತು ಗೊಳಿಸಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ, ಸರ್ಕಾರವು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13 ರಡಿಯಲ್ಲಿ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧದ ಆರೋಪ ಪಟ್ಟಿಗಳನ್ನು ಅವರುಗಳಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸುವಂತೆ ಮೇಲೆ ಕ್ರ.ಸಂ.(3) ರಲ್ಲಿ ಓದಲಾದ ದಿನಾಂಕ 19–12–2003ರಲ್ಲಿ ಕೆಳಕಂಡ ಅಧಿಕಾರಿ/ನೌಕರರಿಗೆ ಕಾರಣ ಕೇಳುವ ನೋಟೀಸ್ ನೀಡಲಾಗಿತ್ತು.

1) ಶ್ರೀ ಬಿ.ಡಿ. ಶ್ರೀಶೈಲ, ಹಿಂದಿನ ತಹಶೀಲ್ದಾರ್, ಚಾಮರಾಜನಗರ ತಾಲ್ಲೂಕು
2) ಶ್ರೀ ಎಂ. ವೆಂಕಟಪ್ಪ, ಶಿರಸ್ತೇದಾರ್, ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು
3) ಶ್ರೀ ಕೆ. ಸಿದ್ದಪ್ಪ, ಶಿರಸ್ತೇದಾರ್, ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು
4) ಶ್ರೀ ಕೆ.ವಿ. ನಾಗರಾಜು, ರಾಜಸ್ವ ನಿರೀಕ್ಷಕ, ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು
5) ಶ್ರೀ ಬೆಳ್ಳೇಗೌಡ, ಗ್ರಾಮಲೆಕ್ಕಿಗ, ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು
6) ಶ್ರೀ ಜಿ.ಪಿ. ಸತೀಶ್, ಗ್ರಾಮಲೆಕ್ಕಿಗ, ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು
7) ಶ್ರೀ ಮೊಹಮ್ಮದ್ ಇಕ್ಬಾಲ್ ಅಹಮ್ಮದ್, ದ್ವಿ.ದ.ಸ., ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು
8) ಶ್ರೀ ಸುಬ್ಬಣ್ಣ, 'ಡಿ' ಗ್ರೂಪ್ ನೌಕರ, ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು

ಮೇಲೆ ಕ್ರಮಾಂಕ 4(ರಲ್ಲಿ) ಓದಲಾದ ಲಿಖಿತ ಹೇಳಿಕೆಗಳಲ್ಲಿ ಶ್ರೀ ಬೆಳ್ಳೇಗೌಡ ಹಾಗೂ ಶ್ರೀ ಜಿ.ಪಿ. ಸತೀಶ್ ಇವರುಗಳು ತಮ್ಮ ಮೇಲೆ ಮಾಡಿರುವ ಆರೋಪಗಳನ್ನು ನಿರಾಕರಿಸಿರುತ್ತಾರೆ. ಉಳಿದವರೆಲ್ಲ ಪ್ರಕರಣಕ್ಕೆ ಸಂಬಂಧಿಸಿದಂತೆ, ಕೆಲವು ದಾಖಲಾತಿ ಪ್ರತಿಗಳನ್ನು ಒದಗಿಸುವಂತೆ ಕೋರಿದ್ದಾರೆ. ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಹೇಳಿಕೆ/ಕೋರಿಕೆಗಳನ್ನು ಸರ್ಕಾರವು ಪರಿಶೀಲಿಸಿ, ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ಭಾವಿಸಿ ಮೇಲೆ ಓದಲಾದ ಕ್ರ.ಸಂ. (5) ರಲ್ಲಿ ದಿನಾಂಕ: 23–06–2004ರ ಆದೇಶದಲ್ಲಿ ಶ್ರೀ ಎಸ್.ಎಸ್. ಸಂಗೋಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರ ಕೇಂದ್ರ ಸ್ಥಾನಿಕ ಸಹಾಯಕರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ, ವಿಚಾರಣೆ ಜರುಗಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (6)ರ ದಿನಾಂಕ 25–01–2005ರ ಆದೇಶದಲ್ಲಿ ಶ್ರೀ ಬಿ.ಡಿ. ಶ್ರೀಶೈಲ, ತಹಶೀಲ್ದಾರ್‌ರವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು, ಕೂಡಲೇ ಜಾರಿಗೆ ಬರುವಂತೆ ಅವರನ್ನು ಅಮಾನತ್ತಿನಿಂದ ತೆರವುಗೊಳಿಸಲಾಯಿತು.

ಮೇಲೆ ಓದಲಾದ ಕ್ರ.ಸಂ.(7)ರ ದಿನಾಂಕ 2–6–2005 ರಲ್ಲಿ ಪ್ರಕರಣದ ಕುರಿತು ಇಲಾಖಾ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಎಲ್ಲಾ ಅಧಿಕಾರಿ/ನೌಕರರ ವಿರುದ್ಧ ಮಾಡಲಾದ ಆಪಾದನೆಗಳು ರುಜುವಾತಾಗಿವೆ ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(8)ರಲ್ಲಿ ಓದಲಾದ ದಿನಾಂಕ 12–09–2005 ರಲ್ಲಿ ಸದರಿ ವರದಿ ಆಧರಿಸಿ, ಎಲ್ಲಾ ಅಧಿಕಾರಿ/ನೌಕರರುಗಳಿಗೆ ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳುವ ನೋಟೀಸು ಜಾರಿ ಮಾಡಲಾಗಿದ್ದು, ಕ್ರ.ಸಂ.9 ರಲ್ಲಿ ಓದಲಾದ ಹೇಳಿಕೆಗಳಲ್ಲಿ ಸದರಿ ನೋಟೀಸಿಗೆ ಉತ್ತರ ನೀಡಿದ ಎಲ್ಲಾ ಆಪಾದಿತರು ತಮ್ಮ ವಿರುದ್ಧದ ಆರೋಪವನ್ನು ಅಲ್ಲಗಳೆದಿರುತ್ತಾರೆ. ಅದರಂತೆ, ಸರ್ಕಾರವು ಅವರುಗಳ ಲಿಖಿತ ಸಮಜಾಯಿಷಿಗಳನ್ನು ಒಪ್ಪಿಕೊಳ್ಳದೇ, ಈ ನೌಕರರು ಸುಳ್ಳು ದಾಖಲೆಗಳನ್ನು ಸೃಷ್ಟಿಸಿ, ಅಕ್ರಮವಾಗಿ ಸರ್ಕಾರಿ ಜಮೀನನ್ನು ಬೇನಾಮಿ ವ್ಯಕ್ತಿಗಳಿಗೆ ಮಾಡಿರುವುದರಿಂದ ಸರ್ಕಾರಕ್ಕೆ ನಷ್ಟ ಉಂಟಾಗಿರುವುದು. ಆದುದರಿಂದ ಸದರಿ ಅಧಿಕಾರಿಗಳ/ನೌಕರರ ವಿರುದ್ಧ ಕಠಿಣ ದಂಡನೆ ವಿಧಿಸಲು ನಿರ್ಣಯ ತೆಗೆದುಕೊಂಡಿದ್ದು, ಅದರಂತೆ ಸೇವೆಯಲ್ಲಿರುವವರನ್ನು ಸೇವೆಯಿಂದ ವಜಾ ಮಾಡುವುದು, ನಿವೃತ್ತರಾದವರಿಗೆ ಎಲ್ಲಾ ನಿವೃತ್ತಿ ಸೌಲಭ್ಯಗಳನ್ನು ರದ್ದುಗೊಳಿಸಲು ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ಅವರುಗಳಿಂದ ವಸೂಲು ಮಾಡುವುದು ಹಾಗೂ ಇವರುಗಳ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲು ಮಾಡುವುದೆಂದು ತೀರ್ಮಾನಿಸಿ, ಮೇಲೆ ಓದಲಾದ ಕ್ರ.ಸಂ.(10)ರಲ್ಲಿ ಈ ದಂಡನಾ ಪ್ರಸ್ತಾವನೆಗೆ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಆದರೆ, ದಿನಾಂಕ 26–09–2006 ರಂದು ಆಯೋಗದವರು ಅಧಿಕಾರಿ/ನೌಕರರಿಂದ ವಸೂಲು ಮಾಡಲು ಉದ್ದೇಶಿಸಿರುವ ನಷ್ಟದ ಮೊತ್ತದ ಬಗ್ಗೆ ಮಾಹಿತಿ ನೀಡಲು ಕೋರಿದ್ದರು. ಈ ಬಗ್ಗೆ ದಿನಾಂಕ 28–04–2007 ರಂದು ಚಾಮರಾಜನಗರ ಜಿಲ್ಲಾಧಿಕಾರಿಗಳಿಂದ ವರದಿ ಪಡೆಯಲಾಗಿ, ಸದರಿ ವರದಿಯಲ್ಲಿ, ಸರ್ಕಾರಿ ಗೋಮಾಳ ಜಮೀನು 49–20 ಎಕರೆ ಜಮೀನನ್ನು ಸರ್ಕಾರಕ್ಕೆ ಮರಳಿ ಪಡೆದುಕೊಂಡಿದ್ದು, ಸರ್ಕಾರಕ್ಕೆ

ಯಾವುದೇ ನಷ್ಟ ಉಂಟಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ ಹಾಗೂ ಈಗಾಗಲೇ ಈ ಪ್ರಕರಣದಲ್ಲಿ ಒಟ್ಟು 8 ಮಂದಿ ಅಧಿಕಾರಿ/ನೌಕರರು ಭಾಗಿಯಾಗಿದ್ದು, ಅವರುಗಳಲ್ಲಿ ಈ ಕೆಳಕಂಡವರು ಹಾಲಿ ನಿವೃತ್ತಿ ಹೊಂದಿರುತ್ತಾರೆ.

1) ಶ್ರೀ ಬಿ.ಡಿ. ಶ್ರೀಶೈಲ, ಹಿಂದಿನ ತಹಶೀಲ್ದಾರ
2) ಶ್ರೀ ಬೆಳ್ಳೇಗೌಡ, ರಾಜಸ್ವ ನಿರೀಕ್ಷಕರು
3) ಶ್ರೀ ಕೆ.ವಿ. ನಾಗರಾಜು, ಪ್ರ.ದ.ಸ.
4) ಶ್ರೀ ಸುಬ್ಬಣ್ಣ, 'ಡಿ' ಗ್ರೂಪ್ ನೌಕರ

ಆದರೆ, ಈ ಕೆಳಕಂಡ ಅಧಿಕಾರಿ/ನೌಕರರು ಇನ್ನು ಸೇವೆಯಲ್ಲಿರುತ್ತಾರೆ.

1) ಶ್ರೀ ಕೆ.ಸಿ. ಸಿದ್ದಪ್ಪ, ಶಿರಸ್ತೇದಾರ್
2) ಶ್ರೀ ಎಂ. ವೆಂಕಟಪ್ಪ, ಶಿರಸ್ತೇದಾರ್
3) ಶ್ರೀ ಮಹಮ್ಮದ್ ಇಕ್ಬಾಲ್ ಅಹಮ್ಮದ್, ದ್ವಿ.ದ.ಸ.
4) ಶ್ರೀ ಜಿ.ಪಿ. ಸತೀಶ್, ಗ್ರಾಮಲೆಕ್ಕಿಗ

ಮೇಲೆ ಕ್ರ.ಸಂ. (11) ರಲ್ಲಿ ಓದಲಾದ ಸರ್ಕಾರದ ಪತ್ರದ ದಿನಾಂಕ 22-08-2008 ರಲ್ಲಿ ಪ್ರಕರಣವನ್ನು ಮರುಪರಿಶೀಲಿಸಿ ಪ್ರಕರಣದಲ್ಲಿ ಭಾಗಿಯಾಗಿರುವ ಅಧಿಕಾರಿ/ನೌಕರರಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸಲು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಈಗಾಗಲೇ ಸೇವೆಯಿಂದ ನಿವೃತ್ತಿ ಹೊಂದಿರುವ ಈ ಕೆಳಕಂಡ ಅಧಿಕಾರಿ/ನೌಕರರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ರದ್ದುಗೊಳಿಸುವ ದಂಡನೆಯನ್ನು ವಿಧಿಸುವುದು.

1) ಶ್ರೀ ಬಿ.ಡಿ. ಶ್ರೀಶೈಲ, ನಿವೃತ್ತ ತಹಶೀಲ್ದಾರ (ನಿವೃತ್ತಿ ಹೊಂದಿದ ದಿನಾಂಕ 28-02-2006)
2) ಶ್ರೀ ಬೆಳ್ಳೇಗೌಡ, ನಿವೃತ್ತ ರಾಜಸ್ವ ನಿರೀಕ್ಷಕರು (ನಿವೃತ್ತಿ ಹೊಂದಿದ ದಿನಾಂಕ 30-09-07)
3) ಶ್ರೀ ಕೆ.ವಿ. ನಾಗರಾಜು, ನಿವೃತ್ತ ಪ್ರ.ದ.ಸ. (ನಿವೃತ್ತಿ ಹೊಂದಿದ ದಿನಾಂಕ 28-02-2004)
4) ಶ್ರೀ ಸುಬ್ಬಣ್ಣ, 'ಡಿ' ಗ್ರೂಪ್ ನೌಕರ (ನಿವೃತ್ತಿ ಹೊಂದಿದ ದಿನಾಂಕ 31-12-2007)

ಹಾಗೂ

ಸೇವೆಯಲ್ಲಿರುವ ಈ ಕೆಳಕಂಡ ನೌಕರರನ್ನು ಸೇವೆಯಿಂದ ವಜಾಗೊಳಿಸಲು ದಂಡನೆಯನ್ನು ವಿಧಿಸುವುದು.

1) ಶ್ರೀ ಕೆ.ಸಿ. ಸಿದ್ದಪ್ಪ, ಶಿರಸ್ತೇದಾರ್, ಪಿರಿಯಾಪಟ್ಟಣ, ತಾಲ್ಲೂಕು ಕಛೇರಿ
2) ಶ್ರೀ ಎಂ. ವೆಂಕಟಪ್ಪ, ಶಿರಸ್ತೇದಾರರು, ಪ್ರಾದೇಶಿಕ ಆಯುಕ್ತರ ಕಛೇರಿ, ಮೈಸೂರು
3) ಶ್ರೀ ಮಹಮ್ಮದ್ ಇಕ್ಬಾಲ್ ಅಹಮ್ಮದ್, ದ್ವಿ.ದ.ಸ., ತಾಲ್ಲೂಕು ಕಛೇರಿ, ಗುಂಡ್ಲುಪೇಟೆ
4) ಶ್ರೀ ಜಿ.ಪಿ. ಸತೀಶ್, ಗ್ರಾಮಲೆಕ್ಕಿಗ, ಯಳಂದೂರು ತಾಲ್ಲೂಕು

ಮೇಲೆ ಕ್ರ.ಸಂ. (12) ರಲ್ಲಿ ಓದಲಾದ ದಿನಾಂಕ 12-01-2009 ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಸರ್ಕಾರವು ಕೋರಿರುವಂತೆ ಪರಿಷ್ಕೃತ ಪ್ರಸ್ತಾವನೆಯಂತೆ ದಂಡನೆಯನ್ನು ವಿಧಿಸಲು ಹಾಗೂ ಸೇವೆಯಲ್ಲಿರುವ ಆಪಾದಿತರು ಇನ್ನೂ ಸೇವೆಯಲ್ಲಿದ್ದಾರೆಯೇ? ಎಂಬುದನ್ನು ಖಚಿತಪಡಿಸಿಕೊಂಡು ದಂಡನೆಯನ್ನು ವಿಧಿಸಲು ಸಹಮತಿಯನ್ನು ನೀಡಿತ್ತು.

ಪ್ರಕರಣವನ್ನು ಸರ್ಕಾರದ ಹಂತದಲ್ಲಿ ಪುನಃ ಮರುಪರಿಶೀಲನೆ ಮಾಡಿ, ಈ ವಿಷಯದ ಬಗ್ಗೆ, ಚಾಮರಾಜನಗರ ಜಿಲ್ಲಾಧಿಕಾರಿಗಳಿಂದ ವರದಿ ಪಡೆದಿದ್ದು, ಅವರ ಪತ್ರ ಸಂ. ಸಿಬ್ಬಂದಿ (2) : ಸಿಸಿಎ : 06-02-03, ದಿನಾಂಕ 28-04-2007 ರಲ್ಲಿ ಈ ಕೆಳಗಿನಂತೆ ವರದಿಯನ್ನು ಸಲ್ಲಿಸಿರುತ್ತಾರೆ. ಉಪನೋಂದಣಾಧಿಕಾರಿಗಳ ಅಂಕಿ-ಅಂಶಗಳಂತೆ ಚಾಮರಾಜನಗರ ತಾಲ್ಲೂಕು, ಚಂದಕವಾಡಿ ಹೋಬಳಿಯ ಜ್ಯೋತಿಗೌಡನಪುರ ಗ್ರಾಮದ ಸರ್ವೆ ನಂ. 184 ರಲ್ಲಿ ಗೋಮಾಳ ಜಮೀನಾಗಿದ್ದು, ಅದಕ್ಕೆ ಸಂಬಂಧಿಸಿದಂತೆ, ಅಕ್ರಮವಾಗಿ ಖಾತೆ ಮಾಡಿರುವ ವಿಸ್ತೀರ್ಣ 49 ಎಕರೆ 20 ಗುಂಟೆ ಆಗಿದ್ದು, ಇದರ ಒಟ್ಟು ಮೌಲ್ಯ ರೂ.13,77,600 ಗಳಾಗಿರುತ್ತದೆ. ಕೊಳ್ಳೇಗಾಲ ಉಪವಿಭಾಗಾಧಿಕಾರಿಗಳು ಮತ್ತು ಗಣಿ ಇಲಾಖೆಯ ಅಧಿಕಾರಿಗಳು ಸ್ಥಳ ತನಿಖೆ ಮಾಡಿದ್ದು, ಸರ್ವೆ ನಂ. 184 ರಲ್ಲಿ ಅಕ್ರಮವಾಗಿ ಖಾತೆ ಮಾಡಲಾದ ಯಾವುದೇ ಹೆಸರಿನವರಿಗೆ ಗಣಿಗಾರಿಕೆ ಮಾಡಲು ಅನುಮತಿ ನೀಡಿರುವುದಿಲ್ಲ ಹಾಗೂ ವ್ಯವಸಾಯವನ್ನು ಸಾಗುವಳಿ ಮಾಡಿರುವುದಿಲ್ಲ. ಬೇನಾಮಿ ವ್ಯಕ್ತಿಗಳ ಹೆಸರಿನಲ್ಲಿ ಖಾತೆ ಮಾಡಿಸಿಕೊಂಡಿರುವವರು ಗಣಿಗಾರಿಕೆ ಮಾಡಿರುವುದಿಲ್ಲವೆಂದು ಹಾಗೂ ಸರ್ಕಾರಿ ಗೋಮಾಳ 49.20 ಎಕರೆ/ಗುಂಟೆ

ಜಮೀನನ್ನು ಸರ್ಕಾರಕ್ಕೆ ಮರಳಿ ಪಡೆದುಕೊಂಡಿದ್ದು, ಗೋಮಾಳವೆಂದು ದಾಖಲೆಯಾಗಿರುತ್ತದೆ. ಇದರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕವಾಗಿ ನಷ್ಟ ಉಂಟಾಗಿರುವುದಿಲ್ಲ ಎಂದು ವರದಿಯಲ್ಲಿ ತಿಳಿಸಿರುತ್ತಾರೆ.

ಈ ಪ್ರಕರಣದಲ್ಲಿ ಸರ್ಕಾರಕ್ಕೆ ಆರ್ಥಿಕವಾಗಿ ಯಾವುದೇ ನಷ್ಟ ಉಂಟಾಗಿರುವುದಿಲ್ಲವೆಂಬ ಅಂಶದೊಂದಿಗೆ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಇವರು ವರದಿಯನ್ನು ಸಲ್ಲಿಸಿರುವ ಹಿನ್ನಲೆಯಲ್ಲಿ, ಈ ಪ್ರಕರಣವನ್ನು ಸರ್ಕಾರವು ಮರುಪರಿಶೀಲಿಸಿ, ಸದರಿ ಪ್ರಕರಣದಲ್ಲಿ ಒಟ್ಟು 8 ಮಂದಿ ಅಧಿಕಾರಿ/ನೌಕರರು ಭಾಗಿಯಾಗಿದ್ದು, ಅವರುಗಳಲ್ಲಿ ಶ್ರೀ ಬಿ.ಡಿ. ಶ್ರೀಶೈಲ, ಹಿಂದಿನ ತಹಶೀಲ್ದಾರ, ಶ್ರೀ ಬೆಳ್ಳೇಗೌಡ, ರಾಜಸ್ವ ನಿರೀಕ್ಷಕ, ಶ್ರೀ ಕೆ.ವಿ. ನಾಗರಾಜ್, ಪ್ರ.ದ.ಸ. ಮತ್ತು ಶ್ರೀ ಸುಬ್ಬಣ್ಣ, 'ಡಿ' ಗ್ರೂಪ್ ನೌಕರ ಇವರುಗಳು ಹಾಲಿ ನಿವೃತ್ತಿ ಹೊಂದಿರುತ್ತಾರೆ. ಆದರೆ, ಶ್ರೀ ಕೆ.ಸಿ. ಸಿದ್ದಪ್ಪ, ಶಿರಸ್ತೇದಾರ್, ಶ್ರೀ ಎಂ. ವೆಂಕಟಪ್ಪ, ಶಿರಸ್ತೇದಾರರು, ಶ್ರೀ ಮೊಹಮ್ಮದ್ ಇಕ್ಬಾಲ್ ಅಹಮ್ಮದ್, ದ್ವಿ.ದ.ಸ. ಮತ್ತು ಶ್ರೀ ಜಿ.ಪಿ. ಸತೀಶ್, ಗ್ರಾಮಲೆಕ್ಕಿಗ ಇವರುಗಳು ಇನ್ನೂ ಸೇವೆಯಲ್ಲಿರುತ್ತಾರೆ. ಆದ್ದರಿಂದ ಈ ಎಲ್ಲಾ ಅಧಿಕಾರಿ/ನೌಕರರುಗಳ ವಿರುದ್ಧ ಹೂಡಲಾಗಿದ್ದ ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಿ ಹಾಗೂ ಸೇವೆಯಲ್ಲಿ ಇರುವವರಿಗೆ ಎಚ್ಚರಿಕೆ ನೀಡಿ ಈ ಪ್ರಕರಣವನ್ನು ಮುಕ್ತಾಯ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದ್ದರಿಂದ ಈ ಬಗ್ಗೆ ಕೆ.ಪಿ.ಎಸ್.ಸಿ. (ಕನ್ಸಲ್ಟೇಷನ್) ರೆಗ್ಯೂಲೇಷನ್ಸ್ 2000 ನಿಯಮ 6(ಇ) ರನ್ವಯ ಈ ಪ್ರಸ್ತಾವನೆಗೆ ಪರಿಷ್ಕೃತ ಅನುಮೋದನೆ ಅಗತ್ಯವಿರುತ್ತದೆ. ಆದುದರಿಂದ ಮೇಲೆ ಕ್ರ.ಸಂ. (13)ರಲ್ಲಿ ಓದಲಾದ ಸರ್ಕಾರದ ಪತ್ರದ ದಿನಾಂಕ 28–10–2009 ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಮೇಲೆ ಕ್ರ.ಸಂ.(14) ರಲ್ಲಿ ಓದಲಾದ ದಿನಾಂಕ 30–01–2010 ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿರುತ್ತದೆ. ಈ ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 10 ಎಡಿಇ 2003, ಬೆಂಗಳೂರು, ದಿನಾಂಕ 25ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಈ ಪ್ರಕರಣದ ಕುರಿತು, ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರ ದಿನಾಂಕ 28–04–2007ರ ವರದಿಯನ್ನು ಒಪ್ಪಿ ಸರ್ಕಾರಿ ಗೋಮಾಳ ಜಮೀನು 49.20 ಎಕರೆ/ಗುಂಟೆ ಜಮೀನನ್ನು ಸರ್ಕಾರಕ್ಕೆ ಮರಳಿ ಪಡೆದಿರುವುದರಿಂದ ಹಾಗೂ ಇವರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು ಸರ್ಕಾರವು ತೀರ್ಮಾನಿಸಿ, ಈ ಪ್ರಕರಣದಲ್ಲಿ ಭಾಗಿಯಾಗಿದ್ದ ಶ್ರೀ ಕೆ.ಸಿ. ಸಿದ್ದಪ್ಪ, ಶಿರಸ್ತೇದಾರ್, ಶ್ರೀ ಎಂ. ವೆಂಕಟಪ್ಪ, ಶಿರಸ್ತೇದಾರರು, ಶ್ರೀ ಮೊಹಮ್ಮದ್ ಇಕ್ಬಾಲ್ ಅಹಮ್ಮದ್, ದ್ವಿ.ದ.ಸ. ಮತ್ತು ಶ್ರೀ ಜಿ.ಪಿ. ಸತೀಶ್, ಗ್ರಾಮಲೆಕ್ಕಿಗ ಇವರುಗಳು ಹಾಲಿ ಸೇವೆಯಲ್ಲಿದ್ದು, ಇವರಿಗೆ ಇನ್ನು ಮುಂದೆ ಎಚ್ಚರಿಕೆಯಿಂದ ಕೆಲಸವನ್ನು ನಿರ್ವಹಿಸುವಂತೆ ಸೂಚಿಸಿದೆ ಹಾಗೂ ಸೇವೆಯಿಂದ ನಿವೃತ್ತರಾದ ಶ್ರೀ ಬಿ.ಡಿ. ಶ್ರೀಶೈಲ, ನಿವೃತ್ತ ತಹಶೀಲ್ದಾರ, ಶ್ರೀ ಬೆಳ್ಳೇಗೌಡ, ನಿವೃತ್ತ ಕಂದಾಯ ನಿರೀಕ್ಷಕರು, ಶ್ರೀ ಕೆ.ವಿ. ನಾಗರಾಜು, ನಿವೃತ್ತ ಪ್ರ.ದ.ಸ. ಹಾಗೂ ಶ್ರೀ ಸುಬ್ಬಣ್ಣ, ನಿವೃತ್ತ 'ಡಿ' ಗ್ರೂಪ್ ನೌಕರರುಗಳನ್ನೊಳಗೊಂಡಂತೆ ಈ ಎಲ್ಲಾ ಅಧಿಕಾರಿ/ನೌಕರರುಗಳ ವಿರುದ್ಧ ಮಾಡಲಾಗಿದ್ದ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್.652

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಅಯ್ಯಪ್ಪ, ಹಿಂದಿನ ದ್ವಿತೀಯ ದರ್ಜೆ ಸಹಾಯಕ, ಆಳಂದ ತಾಲ್ಲೂಕು ಕಛೇರಿ ಪ್ರಸ್ತುತ ಕಂದಾಯ ನಿರೀಕ್ಷಕರು, ಕರ್ಜಗಿ, ಅಫಜಲಪುರ ತಾಲ್ಲೂಕು ಇವರ ವಿವಾದಾಸ್ಪದ ಇಲಾಖಾ ವಿಚಾರಣೆ – ದಂಡನೆ ವಿಧಿಸಿರುವುದನ್ನು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 62 ಎಡಿಇ 96, ದಿನಾಂಕ 20–10–1999.
2. ರಾಜ್ಯಪಾಲರ ಅಧೀನ ಕಾರ್ಯದರ್ಶಿ ಇವರ ಪತ್ರ ಸಂಖ್ಯೆ : ಜಿಎಸ್ 12 ಆರ್‌ಎಸಿ 2009, ದಿನಾಂಕ 24–07–2009 ಮತ್ತು ಜಿ.ಎಸ್. 3577 ಡಿ 2009, ದಿನಾಂಕ 24–07–2009
3. ಶ್ರೀ ಅಯ್ಯಪ್ಪ, ಕಂದಾಯ ನಿರೀಕ್ಷಕರು, ಕರಜಗಿ (ವಲಯ) ಅಫಜಲಪುರ ತಾಲ್ಲೂಕು ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿ ದಿನಾಂಕ 10–11–2009 ಮತ್ತು 16–02–2010.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ಕಛೇರಿಯಲ್ಲಿ ಕರ್ನಾಟಕ ಆರ್ಥಿಕ ಸಂಹಿತೆ 1958ರ ನಿಯಮಗಳನ್ನು ಉಲ್ಲಂಘಿಸಿ ರೂ.1,13,365–00 ಮೊಬಲಗನ್ನು ದುರುಪಯೋಗಪಡಿಸಿಕೊಳ್ಳಲು ಕಾರಣರಾಗಿ ಕರ್ತವ್ಯಲೋಪ ಎಸಗಿದ್ದರೆಂಬ

ಆರೋಪಗಳ ಮೇಲೆ ಶ್ರೀ ಹನುಮಂತಪ್ಪ, ಹಿಂದಿನ ತಹಸೀಲ್ದಾರ್, ಆಳಂದ ತಾಲ್ಲೂಕು, ಶ್ರೀ ಡಿ.ವೈ.ಪಾಟೀಲ್, ಹಿಂದಿನ ಶಿರಸ್ತೇದಾರ್, ಆಳಂದ ತಾಲ್ಲೂಕು ಕಛೇರಿ ಹಾಗೂ ಶ್ರೀ ಅಯ್ಯಪ್ಪ, ಹಿಂದಿನ ದ್ವಿತೀಯ ದರ್ಜೆ ಸಹಾಯಕ, ಆಳಂದ ತಾಲ್ಲೂಕು ಕಛೇರಿ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿತ್ತು. ನಂತರ ಈ ಬಗ್ಗೆ ವಿಚಾರಣಾಧಿಕಾರಿಗಳು ನೀಡಿದ ವಿಚಾರಣಾ ವರದಿಯನ್ವಯ ಆರೋಪಗಳು ಸಾಭೀತಾಗಿದ್ದರಿಂದ ಮೇಲೆ ಓದಲಾದ ಕ್ರ.ಸಂ.(1) ದಿನಾಂಕ 20-10-1999 ರಲ್ಲಿ ಈ ಕೆಳಕಂಡ ದಂಡನೆ ಆದೇಶವನ್ನು ಹೊರಡಿಸಲಾಗಿರುತ್ತದೆ.

i. ಶ್ರೀ ಡಿ.ವೈ. ಪಾಟೀಲ, ಹಿಂದಿನ ಶಿರಸ್ತೇದಾರ್ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 8(iii) ರನ್ವಯ ಇವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯಲು ಮತ್ತು ದುರುಪಯೋಗವಾಗಿರುವ ಒಟ್ಟು ಮೊತ್ತ ರೂ.1,13,365-00 ಮೊಬಲಗಿನ 1/3 (ಮೂರನೇ ಒಂದು) ಭಾಗದಷ್ಟು ಹಣವನ್ನು ಅವರ ವೇತನದಲ್ಲಿ ಮಾಹೆಯಾನ ವಸೂಲು ಮಾಡಲು

ಮತ್ತು

ii. ಶ್ರೀ ಅಯ್ಯಪ್ಪ, ಹಿಂದಿನ ದ್ವಿತೀಯ ದರ್ಜೆ ಸಹಾಯಕ, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 8(v) ರನ್ವಯ ಇವರ ಕಾಲಿಕ ವೇತನದಲ್ಲಿ ಕನಿಷ್ಠ ಮಟ್ಟಕ್ಕೆ ಇಳಿಸಲು ಮತ್ತು ದುರುಪಯೋಗ ಮಾಡಿದ ಒಟ್ಟು ಮೊತ್ತ ರೂ. 1,13,365-00 ಮೊಬಲಗಿನ 1/3 ನೇ (ಮೂರನೇ ಒಂದು ಭಾಗದಷ್ಟು) ಹಣವನ್ನು ಅವರ ವೇತನದಲ್ಲಿ ಮಾಹೆಯಾನ ರೂ.1,000-00 ರಂತೆ ವಸೂಲು ಮಾಡಲು ಆದೇಶಿಸಲಾಗಿದೆ.

ಶ್ರೀ ಅಯ್ಯಪ್ಪ, ಕಂದಾಯ ನಿರೀಕ್ಷಕರು ಇವರು ಸರ್ಕಾರದ ದಂಡನೆ ಆದೇಶ ದಿನಾಂಕ 20-10-1999 ರಲ್ಲಿ ವಿಧಿಸಿದ್ದ ದಂಡನೆಯನ್ನು ರದ್ದುಪಡಿಸುವ ಬಗ್ಗೆ ಮಾನ್ಯ ರಾಜ್ಯಪಾಲರಿಗೆ ಮನವಿಯನ್ನು ಸಲ್ಲಿಸಿರುತ್ತಾರೆ ಅದರಂತೆ ಮೇಲೆ ಓದಲಾದ ಕ್ರ.ಸಂ.(2) ದಿನಾಂಕ 24-07-2009 ರಲ್ಲಿ ರಾಜ್ಯಪಾಲರ ಅಧೀನ ಕಾರ್ಯದರ್ಶಿಗಳು ಶ್ರೀ ಅಯ್ಯಪ್ಪ ಇವರ ಮನವಿ ಕುರಿತು ತೆಗೆದುಕೊಂಡ ಕ್ರಮದ ವರದಿಯನ್ನು ಸಲ್ಲಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (3) ದಿನಾಂಕ 16-02-2010 ರಲ್ಲಿ ಶ್ರೀ ಅಯ್ಯಪ್ಪ, ಕಂದಾಯ ನಿರೀಕ್ಷಕರು, ಕರಜಗಿ ವಲಯ ತಾಲ್ಲೂಕು ಅಫಜಲಪುರ, ಗುಲ್ಬರ್ಗಾ ಜಿಲ್ಲೆ ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ ಸರ್ಕಾರದ ದಂಡನೆ ಆದೇಶ ಹೊರಡಿಸುವ ಮೊದಲು ದಿನಾಂಕ 01-01-1999 ರಂದು ವೇತನ ಶ್ರೇಣಿ 3850-7050 ರಲ್ಲಿ ಮೂಲ ವೇತನ ರೂ.5325-00 ಪಡೆಯುತ್ತಿದ್ದೆ. ಆದರೆ ಸರ್ಕಾರದ ಆದೇಶ ಜಾರಿಯಾದಾಗಿನಿಂದ ಮೂಲವೇತನ ರೂ. 3850-00 ನಿಗದಿಪಡಿಸಿರುತ್ತಾರೆ. ಇದರಿಂದ ತಮಗೆ 17 ವಾರ್ಷಿಕ ಬಡ್ತಿಗಳು ಲಾಸ್ ಆಗಿರುತ್ತದೆ ಎಂದು ಹಾಗೂ ದಂಡನೆ ವಿಧಿಸುವ ಆದೇಶದಲ್ಲಿ ಎಷ್ಟು ಅವಧಿಯೆಂದು ನಮೂದಿಸಿಲ್ಲವಾದ್ದರಿಂದ ತಮಗೆ ಕಾಲಿಕ ವೇತನದ ಕೆಳಮಟ್ಟಕ್ಕೆ ಇಳಿಸಿದ್ದನ್ನು ನಿಗದಿತ ಅವಧಿಗೆ ಸೀಮಿತಿಗೊಳಿಸಿ, ವೇತನ ಪುನರ್ ನಿಗದಿಪಡಿಸಲು ಕೋರಿರುತ್ತಾರೆ. ತಮ್ಮ ಪತ್ನಿಯಾದ ಶ್ರೀಮತಿ ನಿರ್ಮಲ ಇವರಿಗೆ ಬ್ಲಡ್ ಕ್ಯಾನ್ಸರ್ ಇದ್ದು, ಪ್ರತಿ ತಿಂಗಳು ಆಸ್ಪತ್ರೆಗೆ ಹಾಜರಾಗಿ ರಕ್ತ ಪರೀಕ್ಷೆ ಮಾಡಿಕೊಂಡು ತಿಂಗಳಿಗೆ ರೂ.10,000 ರಂತೆ ಮಾತ್ರೆಗಳು ಪಡೆಯಲು ವೈದ್ಯಾಧಿಕಾರಿಗಳು ಸೂಚಿಸಿರುತ್ತಾರೆ. ಆದ್ದರಿಂದ ತಮ್ಮ ವೇತನ ಕಾಲಿಕ ವೇತನದ ಕೆಳಮಟ್ಟಕ್ಕೆ ಇಳಿಸಿರುವುದರಿಂದ ತಾವು ಆರ್ಥಿಕ ಹಾಗೂ ಮಾನಸಿಕವಾಗಿ ದುರ್ಬಲನಾಗಿರುವುದಾಗಿ ತಿಳಿಸಿ ದಿನಾಂಕ 20-10-1999 ರ ಸರ್ಕಾರಿ ದಂಡನೆ ಆದೇಶದಲ್ಲಿ ಕನಿಷ್ಠ ಮಟ್ಟಕ್ಕೆ ಇಳಿಸಿದ ವೇತನವನ್ನು ತೆಗೆದುಹಾಕಿ, ವೇತನ ಪುನರ್ ನಿಗದಿಪಡಿಸಿ ದಿನಾಂಕ 20-10-1999 ರಿಂದ ನಷ್ಟ ಆದ ವ್ಯತ್ಯಾಸದ ಹಣ ಮರುಪಾವತಿ ಮಾಡುವಂತೆ ಕೋರಿದ್ದು, ಹಾಗೂ ಇದೇ ವಿಷಯಕ್ಕೆ ಸಂಬಂಧಿಸಿದಂತೆ, ಸುಮಾರು 10 ವರ್ಷ ಬಾಕಿ ಇರುವ ಅರ್ಜಿ ಸಂಖ್ಯೆ : 4419/2003 ನ್ನು ಅರ್ಜಿದಾರರಾದ ತಾವು ಹಿಂದಕ್ಕೆ ಪಡೆದುಕೊಂಡಿದ್ದು ಅದರಂತೆ ಮಾನ್ಯ ಕೆಎಟಿಯು ದಿನಾಂಕ 25-01-2010 ರಂದು ಅರ್ಜಿಯನ್ನು ವಜಾಗೊಳಿಸಿ ಅಂತಿಮ ಆದೇಶ ಹೊರಡಿಸಿರುತ್ತದೆ. ಆದ್ದರಿಂದ ಸರ್ಕಾರದ ದಂಡನೆ ಸಂಖ್ಯೆ : ಆರ್‌ಡಿ 62 ಎಡಿಇ 96, ದಿನಾಂಕ 20-10-1999 ರನ್ವಯ ತಮಗೆ ಕಾಲಿಕ ವೇತನದಲ್ಲಿ ಕನಿಷ್ಠ ಮಟ್ಟಕ್ಕೆ ಇಳಿಸಿದ್ದು ಯಾವುದೇ ಅವಧಿಯನ್ನು ನಮೂದಿಸಿರುವುದಿಲ್ಲ ಹಾಗೂ ಇದೇ ಆದೇಶದಲ್ಲಿ ದುರುಪಯೋಗವಾಗಿರುವ ಮೊತ್ತ ರೂ.1,13,365/- ಮೊಬಲಗಿನ 1/3 ಭಾಗದಷ್ಟು ಹಣವನ್ನು ತಮ್ಮ ವೇತನದಲ್ಲಿ ಮಾಹೆಯಾನ ರೂ.1000/- ಗಳಂತೆ ವಸೂಲು, ಮಾಡಲು ಸಹಾ ಆದೇಶವಾಗಿದ್ದು, ಅದರಂತೆ 1/3 ಭಾಗದಷ್ಟು ಹಣವನ್ನು ಮರುಪಾವತಿ ಮಾಡಿರುವುದರಿಂದ ಸದರಿ ಸರ್ಕಾರಿ ದಿನಾಂಕ 20-10-1999 ರ ದಂಡನೆ ಆದೇಶವನ್ನು ರದ್ದುಪಡಿಸುವಂತೆ ಮನವಿ ಸಲ್ಲಿಸಿರುತ್ತಾರೆ.

ಶ್ರೀ ಅಯ್ಯಪ್ಪ, ಕಂದಾಯ ನಿರೀಕ್ಷಕರು ಇವರು ಸಲ್ಲಿಸಿದ್ದ ಮನವಿಯನ್ನು ಸರ್ಕಾರವು ಪರಿಶೀಲಿಸಿ ಅವರಿಗೆ ಈ ಹಿಂದೆ ಸರ್ಕಾರದ ದಿನಾಂಕ 20-10-1999ರ ದಂಡನೆ ಆದೇಶದಲ್ಲಿ ದುರುಪಯೋಗವಾಗಿರುವ ಮೊತ್ತ ರೂ.1,13,365/- ಮೊಬಲಗಿನ

1/3 ಭಾಗದಷ್ಟು ಹಣವನ್ನು ಮರುಪಾವತಿಸಿರುವುದಾಗಿ, ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಇವರು ದಿನಾಂಕ 11–02–2003 ರಲ್ಲಿ ವರದಿ ಮಾಡಿರುವುದರಿಂದ ಹಾಗೂ ದಿನಾಂಕ 20–10–1999 ರಲ್ಲಿ ವಿಧಿಸಿದ್ದ ಕಾಲಿಕ ವೇತನದಲ್ಲಿ ಕನಿಷ್ಠ ಮಟ್ಟಕ್ಕೆ ಇಳಿಸಿದ್ದರ ಬಗ್ಗೆ ಆದೇಶದಲ್ಲಿ ಯಾವುದೇ ಅವಧಿ ನಮೂದಿಸಿಲ್ಲವಾದ್ದರಿಂದ ಈ ದಂಡನೆ ಆದೇಶವನ್ನು ಮಾರ್ಪಾಡಿಸಲು ಸರ್ಕಾರವು ನಿರ್ಧರಿಸಿರುವುರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 284 ಎಎಸ್‌ಡಿ 2009, ಬೆಂಗಳೂರು, ದಿನಾಂಕ 2ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 62 ಎಡಿಇ 96, ದಿನಾಂಕ 20–10–1999 ರಲ್ಲಿ ವಿಧಿಸಿದ್ದ ದಂಡನೆ ಆದೇಶವನ್ನು ಶ್ರೀ ಅಯ್ಯಪ್ಪ, ಹಿಂದಿನ ದ್ವಿತೀಯ ದರ್ಜೆ ಸಹಾಯಕ, ಆಳಂದ ತಾಲ್ಲೂಕು ಕಛೇರಿ ಪ್ರಸ್ತುತ ಕಂದಾಯ ನಿರೀಕ್ಷಕರು, ಕರಜಗಿ ವಲಯ, ಅಫಜಲ್‌ಪುರ ತಾಲ್ಲೂಕು ಇವರಿಗೆ ಸಂಬಂಧಪಟ್ಟಂತೆ ಮಾರ್ಪಾಡಿಸಿ ಅವರಿಗೆ ಕಾಲಿಕ ವೇತನದಲ್ಲಿ ಕನಿಷ್ಠ ಮಟ್ಟಕ್ಕೆ ಇಳಿಸಿದ್ದನ್ನು ಐದು ವರ್ಷಗಳಿಗೆ ಮಾತ್ರ ಸೀಮಿತಗೊಳಿಸಿ ಅವರಿಗೆ ಬರಬೇಕಾಗಿದ್ದ ಆರ್ಥಿಕ ಸೌಲಭ್ಯಗಳನ್ನು ಮಂಜೂರು ಮಾಡಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಸಸಾಲಟ್ಟಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್.653

## HORTICULTURE SECRETARIAT

Sub :- "Centrally Sponsored Scheme on Micro Irrigation"-Release of funds – reg.

Read :-
1. Government Order No.: AHD 82 HPP 2009 dated: 26-09-2009.
2. Government Order No.: FD 249 BRS 2009 dated: 02-02-2010.
3. Director of Horticulture letter No. DH/JD (Drip)/AHO/4/09-10 dated 10-02-2010.

**Preamble:**

In the Government Order read at (1) above an amount of Rs. 981.61 lakhs had been released to the Director of Horticulture under the Head of Account 2401-00-108-2-30-059 (plan) in the State sector for meeting the State share requirement towards the "Centrally Sponsored Scheme on Micro Irrigation".

2. Further, Finance Department in its Order rad at (2) above has released Rs. 556.62 lakhs for the same purpose.

3. The Director of Horticulture in his letter read at (3) above has requested to release matching State share.

4. This has been examined and it is decided to release the balance of funds available under the Head of Account 2401-00-108-2-30-059 (plan) towards the State share. Hence this order.

**Government Order No. AHD 82 HPP 2009, Bangalore, dated : 02-03-2010.**

Government is pleased to release to the Director of Horticulture an amount of Rs. 18.39 lakhs (Rupees Eighteen Lakhs and Thirty Nine Thousand only) towards the State share for "Centrally Sponsored Scheme on Micro Irrigation" under the Head of Account 2401-00-108-2-30-059 (plan) in the State sector during the year 2009-10.

2. This order issues with the concurrence of Internal Financial Advisor, Agriculture, Horticulture and Animal Husbandry Department vide Note No. ಕೃತೋಇ 248 ಅಂಅಸ 2009 dated 26-02-2010.

By Order and in the name of the Governor of Karnataka
(A.A. CHAPPARBAND)
Desk Officer
Horticulture Department

PR 665

## INFRASTRUCTURE DEVELOPMENT SECRETARIAT

Sub :- Development of SH-132 on DBOT basis constitution of Tender Scrutiny Committee.

Read :- 1. The Karnataka Transparency in Public Procurement Rules 2000.

2. G.O. No. ID 115 ITS 2008 dt 17-07-2009.

**Preamble:**

In the G.O. dt. 17-07-2009 read at Sl. No. (2) above, sanction has been accorded in principle to take up the development of State Highway-132 (Sanganakallu – Moka road) PPP mode.

As per the said Government order, Karnataka State Highways improvement Project (KSHIP) has been nominated as the nodal agency to undertake the procurement activities has been made vide publicity for development of the said road at Bellary through the National/Local dailies indicating the schedule of bidding as hereunder:-

i. Bid due date – 15-03-2009

ii. Bid opening date – 16-03-2009

In terms of Karnataka Transparency in Public Procurement Rules 2000, the tender accepting authority is required to appoint the "Tender Scrutiny Committee" for undertaking task of tender opening and tender evaluation. Accordingly, it is proposed to constitute a Tender Scrutiny Committee as required under the KTPP Act. Hence this order.

**Government Order No. IDD 115 ITS 2008, Bangalore, dated : 26-02-2010.**

In the circumstances, explained in the preamble, a Tender Scrutiny Committee (TSC) is constituted to undertake the scrutiny of tenders with the following members.

i. Shri. K.L. Lokanatha – Director

ii. Shri. Krishna Reddy – Chief Project Officer

iii. Shri. Kinni – Executive Engineer

iv. Shri. Rabindra Sahu – PPP Expert.

2. The Tender Scrutiny Committee shall carry out scrutiny of the tenders strictly in accordance with evaluation criteria indicated in RFQ document and in accordance with the provision contained in the KTPP Act and rules.

3. The Tender Scrutiny Committee shall ensure the confidentiality of the process of tender evaluation.

By Order and in the name of the Governor of Karnataka

(R. SHIVALINGAIAH)
Under Secretary to Govt. PPP Cell
Infrastructure Development Department

PR 666

## ಇಂಧನ ಸಚಿವಾಲಯ

**ವಿಷಯ :** M/s Punam Powers Private Limited **ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.**

**ಓದಲಾಗಿದೆ :** (1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್ಇಡಿ/06/ಇಡಿಗ/2007/2008 ದಿನಾಂಕ: 6.08/–09–2007 ಹಾಗೂ ಸಂಖ್ಯೆ: ಕೆಆರ್‌ಡಿಎ/06/ಇಡಿಗ/09/3038 ದಿನಾಂಕ 15/16–09–2009.

**(2) ದಿನಾಂಕ**: 23–10–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Punam Powers Private Limited ಇವರಿಗೆ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕು

ಇಡಿಗನ ಹೊಸೂರು ಗ್ರಾಮದ ಬಳಿ ಹೇಮಾವತಿ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ: 23–10–2009ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಲಾಗಿತ್ತು. M/s Punam Powers Private Limited ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 329 ಎನ್‌ಸಿಇ 2007, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2010**

M/s Punam Powers Private Limited ಇವರಿಗೆ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕು ಇಡಿಗನ ಹೊಸೂರು ಗ್ರಾಮದ ಬಳಿ ಹೇಮಾವತಿ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude: $12^0$47'07" Longitude: $76^0$20'12" Power House-Latitude: $12^0$47'02" Longitude: $76^0$20'36") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು, ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 667

**(ಎಸ್.ಜಿ. ಸಂಪತ್‌ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ
## ಸುತ್ತೋಲೆ

ಸಂಖ್ಯೆ: ಕಸಂವಾಪ್ರ 431 ಕಸಧ 2009, ಬೆಂಗಳೂರು, ದಿನಾಂಕ 01-03-2010

**ವಿಷಯ :** "ಜಯ ಭಾರತ ಜನನಿಯ ತನುಜಾತೆ' ನಾಡಗೀತೆ ಪೂರ್ಣಪಾಠವನ್ನು ಹಾಡುವ ಬಗ್ಗೆ.

ಕರ್ನಾಟಕ ಸರ್ಕಾರ 'ರಾಷ್ಟ್ರಕವಿ ಕುವೆಂಪು' ರವರ "ಜಯ ಭಾರತ ಜನನಿಯ ತನುಜಾತೆ" ಕವನದ ಪೂರ್ಣಪಾಠವನ್ನು ನಾಡಗೀತೆಯಾಗಿ ಘೋಷಿಸಿ, ತನ್ನ ಆದೇಶದ ಸಂಖ್ಯೆ: ಕಸಂವಾಪ್ರ 207 ಕಸಧ 2003, ದಿನಾಂಕ: 23-02-2004ರಲ್ಲಿ ಆದೇಶ ಹೊರಡಿಸಿದೆ.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಯೋಗದಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯವರು 2009ರ ಜುಲೈ ಹದಿನೈದನೇ ದಿನಾಂಕದಂದು ರವೀಂದ್ರ ಕಲಾಕ್ಷೇತ್ರದಲ್ಲಿ ಆಯೋಜಿಸಿದ್ದ, ಕರ್ನಾಟಕ ಕಲಾಶ್ರೀ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ "ಜಯ ಭಾರತ ಜನನಿಯ ತನುಜಾತೆ" ಹಾಡಿನ ಆಯ್ದಭಾಗಗಳ ನಾಡಗೀತೆಯನ್ನು ಹಾಡಿದ್ದು, ಇದು ಸರ್ಕಾರದ ಆದೇಶದ ಉಲ್ಲಂಘನೆಯಾದಂತಿದೆ. ಆದ್ದರಿಂದ ಇನ್ನು ಮುಂದೆ ಸಂಗೀತ ನೃತ್ಯ ಅಕಾಡೆಮಿಯವರು ಇದರ ಬಗ್ಗೆ ನಿಗಾ ವಹಿಸಲು ಸೂಚಿಸಿದೆ. ಬೇರೆ ಇಲಾಖೆಗಳಿಗೆ ಸಂಬಂಧಿಸಿದಂತೆ ಜಯ ಭಾರತ ಜನನಿಯ ತನುಜಾತೆ ನಾಡಗೀತೆಯ ಕವನದ ಪೂರ್ಣಪಾಠವನ್ನು ಸರ್ಕಾರದ ಸಮಾರಂಭಗಳಲ್ಲಿ ಹಾಡುವಂತೆ ಈ ಮೂಲಕ ಸಂಬಂಧಿಸಿದ ಎಲ್ಲರಿಗೂ ತಿಳಿಸಲಾಗಿದೆ.

**(ಹೆಚ್.ವಿ. ರಾಮಚಂದ್ರರಾವ್)**

ಪಿ.ಆರ್. 668

ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಚೈತ್ರ ಸಿ.ಎನ್. ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಳುಘಟ್ಟ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀರಿಸುವ ಬಗ್ಗೆ.

**ಓದಲಾಗಿದೆ :** (1) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಜೆಆರ್‌ಓ (2)73/2009–10 ದಿನಾಂಕ 14–12–2009.

(2) ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ/122/ಹೆಚ್‌ಎಸ್‌ಹೆಚ್/2007 ದಿನಾಂಕ: 08–02–2008 ಹಾಗೂ 03–03–2008.

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಡಾ: ಚೈತ್ರ ಸಿ.ಎನ್., ಇವರು ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯ ಪ್ರಕಾರ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ಪ್ರಾಥಮಿಕ ಆರೋಗ್ಯ ಕೇಂದ್ರ, ಬಳುಘಟ್ಟ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ ಇಲ್ಲಿ ದಿನಾಂಕ 18–03–2008 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ತದನಂತರ ದಿನಾಂಕ: 30–06–2009 ರಿಂದ ಅನ್ವಯವಾಗುವಂತೆ ರಾಜೀನಾಮೆ ಸಲ್ಲಿಸಿದ್ದು, ಇವರ ವಿರುದ್ಧ ಇಲಾಖಾ ವಿಚಾರಣೆ/ಮೊಕದ್ದಮೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವಾದ್ದರಿಂದ ದಿನಾಂಕ: 30–06–2009 ರಿಂದ ಜಾರಿಗೆ ಬರುವಂತೆ ವೈದ್ಯರ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 8 ಹೆಚ್‌ಎಸ್‌ಹೆಚ್ 2010, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ: ಚೈತ್ರ ಸಿ.ಎಸ್. ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ ಬಳುಘಟ್ಟ ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ ಇವರು ನೀಡಿರುವ ರಾಜೀನಾಮೆಯನ್ನು ದಿನಾಂಕ: 30–06–2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 669

**(ಐ. ಹೇಮನಾಥ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
ಸೇವೆಗಳು–1)

## HEALTH AND FAMILY WELFARE SECRETARIAT

No. HFW 13 IMM 2009 Bangalore, dated: 4-3-2010.

## CORRIGENDUM

In Column No. 3 of Sl. No. 44 and 45 under the heading “Areas” in Notification-I, III and IV bearing No. HFW 152 IMM 2007, dated: 12-02-2008 instead of “Gulbarga district”, it shall be read as “Gulbarga District and Yadgir District” temporarily till suitable posts are created and filled for Yadgir District.

**By Order and in the name of the Governor of Karnataka**

PR 670

**(N. MAHALAKSHMAMMA)**
Under Secretary to Government
Health and Family Welfare Department

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ :** ಕಾನೂನು ಪದವೀಧರರಿಗೆ ಪ್ರೋತ್ಸಾಹ ಧನ ವಿತರಣೆಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ ಲಾ 47 ಎಲ್‌ಎಜಿ 2007, ದಿನಾಂಕ 11–08–2006.
2) ಸರ್ಕಾರದ ಆದೇಶ ಸಂಖ್ಯೆ ಲಾ 47 ಎಲ್‌ಎಜಿ 2007, ದಿನಾಂಕ 11–07–2007.
3) ಸರ್ಕಾರದ ಆದೇಶ ಸಂಖ್ಯೆ ಲಾ 47 ಎಲ್‌ಎಜಿ 2007, ದಿನಾಂಕ 15–10–2009.
4) ಸರ್ಕಾರದ ಆದೇಶ ಸಂಖ್ಯೆ ಆಇ 357 ಬಿಆರ್‌ಎಸ್ 2009, ದಿನಾಂಕ 1–3–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಸರ್ಕಾರವು ಕಾನೂನು ಪದವೀಧರರಿಗೆ ಮಾಸಿಕ ರೂ. 1000.00 ರಂತೆ 12 ತಿಂಗಳ ಅವಧಿಗೆ ಪ್ರೋತ್ಸಾಹ ಧನ ನೀಡುವ ಯೋಜನೆಯನ್ನು ಆರಂಭಿಸಿರುತ್ತದೆ. ತದನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಯೋಜನೆಯನ್ನು 24 ತಿಂಗಳ ಅವಧಿಗೆ ವಿಸ್ತರಿಸಿ, ಈ ಯೋಜನೆಯನ್ನು ಬಡತನ ರೇಖೆಯೊಳಗೆ ಅಂದರೆ ವಾರ್ಷಿಕ ವರಮಾನ ರೂ. 17,000.00ದ ಮಿತಿಯೊಳಗೆ ಬರುವ ಕಾನೂನು ಪದವೀಧರರಿಗೆ ಅನ್ವಯಿಸುವಂತೆ ಆದೇಶಿಸಲಾಗಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಪ್ರೋತ್ಸಾಹ ಧನ ಪಡೆಯಲು ನಿಗದಿಗೊಳಿಸಲಾಗಿದ್ದ ವಾರ್ಷಿಕ ವರಮಾನ ಮಿತಿಯನ್ನು ರೂ. 17,000.00 ದಿಂದ ರೂ. 40,000.00 ಗಳಿಗೆ ಮಾರ್ಪಡಿಸಲಾಗಿರುತ್ತದೆ. ರಾಜ್ಯದಲ್ಲಿ ಈಗಾಗಲೇ 6,500ಕ್ಕೂ ಹೆಚ್ಚು ಕಾನೂನು ಪದವೀಧರರು ಈ ಯೋಜನೆಯ ಲಾಭ ಪಡೆದಿರುತ್ತಾರೆ. 2009–10ನೇ ಸಾಲಿನಲ್ಲಿ ಒದಗಿಸಲಾಗಿದ್ದ ರೂ. 200.00 ಲಕ್ಷ ಮೊತ್ತದ ಅನುದಾನವು ಸಂಪೂರ್ಣವಾಗಿ ಬಳಕೆಯಾಗಿ ಬಹಳಷ್ಟು ಮೊತ್ತದ ಪ್ರೋತ್ಸಾಹ ಧನ ಪಾವತಿಯು ಬಾಕಿ ಉಳಿದಿರುವ ಕಾರಣದಿಂದಾಗಿ ಜಿಲ್ಲಾಧಿಕಾರಿಗಳಿಂದ ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮನವಿ ಪತ್ರಗಳು ಸರ್ಕಾರದಲ್ಲಿ ಸ್ವೀಕೃತಗೊಂಡಿರುವುದರಿಂದ ಇದನ್ನು ಪರಿಗಣಿಸಿ ಆರ್ಥಿಕ ಇಲಾಖೆಯು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಸರ್ಕಾರಿ ಆದೇಶದಲ್ಲಿ ಕಾನೂನು ಪದವೀಧರರ ಪ್ರೋತ್ಸಾಹ ಧನ ವಿತರಣೆಗಾಗಿ ರೂ.100.00ಲಕ್ಷ ಮೊತ್ತದ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡಿರುತ್ತದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಲಾ 47 ಎಲ್‌ಎಜಿ 2007 (ಭಾ), ಬೆಂಗಳೂರು, ದಿನಾಂಕ 4ನೇ ಮಾರ್ಚ್ 2010**

ಕಾನೂನು ಪದವೀಧರರಿಗೆ ಪ್ರೋತ್ಸಾಹ ಧನ ವಿತರಣೆಗಾಗಿ ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ಜಿಲ್ಲೆಗಳಿಗೆ ಒಟ್ಟು ರೂ. 100.00 ಲಕ್ಷ (ರೂ. ಒಂದು ನೂರು ಲಕ್ಷಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

24 ತಿಂಗಳ ಯೋಜನೆಯಡಿ ಹಾಗೂ ವಾರ್ಷಿಕ ರೂ. 40,000.00 ಆದಾಯ ಮಿತಿಯೊಳಗೆ ಬರುವ ಕಾನೂನು ಪದವೀಧರರಿಗೆ ಮಾತ್ರ ಅನ್ವಯವಾಗುತ್ತದೆ. ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ನಲ್ಲಿ ನೋಂದಾಯಿಸಿದ ಆರ್ಥಿಕ ವರ್ಷದಲ್ಲಿ ಮಾತ್ರ ಈ ಯೋಜನೆಯಡಿ ಕಾನೂನು ಪದವೀಧರರು ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. ಇತರ ಯಾವುದೇ ಯೋಜನೆಯಡಿ ಸೌಲಭ್ಯ ಪಡೆಯುತ್ತಿರುವ ಕಾನೂನು ಪದವೀಧರರು ಈ ಯೋಜನೆಯ ಪ್ರಯೋಜನ ಪಡೆಯಲು ಅರ್ಹರಾಗಿರುವುದಿಲ್ಲ. ಈ ಸಂಬಂಧದ ವೆಚ್ಚಗಳನ್ನು ಲೆಕ್ಕ ಶೀರ್ಷಿಕೆ "2014–00–102–0–06–117 (ಯೋಜನೆ)" ಅಡಿ ಭರಿಸತಕ್ಕದ್ದು. ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಅನುದಾನವನ್ನು ಬಳಸಿದುದಕ್ಕೆ ಬಳಕೆ ಪ್ರಮಾಣ ಸಲ್ಲಿಸತಕ್ಕದ್ದು.

ಇದನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ ಎಫ್‌ಡಿ 77 ಇಎಕ್ಸ್‌ಪಿ.10/2010 ದಿನಾಂಕ 01.03.2010ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಇ. ಶಿವಾನಂದ)**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಅನುಬಂಧ**

(ಸರ್ಕಾರದ ಆದೇಶ ಸಂಖ್ಯೆ ಲಾ 47 ಎಲ್‌ಎಜಿ 2007 (ಭಾ)

ದಿನಾಂಕ 04–03–2010

| ಕ್ರ. ಸಂ. | ಜಿಲ್ಲೆಯ ಹೆಸರು | ಮಂಜೂರು ಮಾಡಿದ ಅನುದಾನ (ರೂ. ಲಕ್ಷ) |
|---|---|---|
| 1. | ಬೆಂಗಳೂರು ನಗರ | 14.50 |
| 2. | ರಾಮನಗರ | 2.00 |
| 3. | ಚಿಕ್ಕಬಳ್ಳಾಪುರ | 0.50 |
| 4. | ತುಮಕೂರು | 3.00 |
| 5. | ಕೋಲಾರ | 3.50 |
| 6. | ಶಿವಮೊಗ್ಗ | 6.00 |
| 7. | ಚಿತ್ರದುರ್ಗ | 0.50 |
| 8. | ದಾವಣಗೆರೆ | 2.50 |
| 9. | ಮೈಸೂರು | 4.00 |
| 10. | ಚಾಮರಾಜನಗರ | 2.00 |
| 11. | ಮಂಡ್ಯ | 5.00 |
| 12. | ದಕ್ಷಿಣ ಕನ್ನಡ | 3.00 |
| 13. | ಉಡುಪಿ | 0.50 |
| 14. | ಹಾಸನ | 2.00 |
| 15. | ಚಿಕ್ಕಮಗಳೂರು | 0.50 |
| 16. | ಬೆಳಗಾವಿ | 15.00 |
| 17. | ಬಿಜಾಪುರ | 3.00 |
| 18. | ಬಾಗಲಕೋಟೆ | 4.00 |
| 19. | ಧಾರವಾಡ | 1.00 |
| 20. | ಗದಗ | 2.50 |
| 21. | ಹಾವೇರಿ | 6.00 |
| 22. | ಗುಲ್ಬರ್ಗ | 12.00 |
| 23. | ಬೀದರ್ | 7.00 |
| | ಒಟ್ಟು | 100.00 |

**(ಇ. ಶಿವಾನಂದ)**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್.682

**ಕಂದಾಯ ಸಚಿವಾಲಯ**

**ವಿಷಯ :** ಬೆಂಗಳೂರು ನಗರ ಜಿಲ್ಲೆಯ 11 ಮೂಲ ಉಪ ನೋಂದಣಿ ಕಛೇರಿಗಳಲ್ಲಿನ 1995–96 ರಿಂದ 2003–04 ರವರೆಗಿನ ಇಂಡೆಕ್ಸ್– II ಸಂಪುಟಗಳಲ್ಲಿನ ನಮೂದನೆಗಳನ್ನು ಸ್ಕ್ಯಾನ್ ಮಾಡುವುದು ಮತ್ತು ಡಾಟಾ ಎಂಟ್ರಿ ಮಾಡುವ ಯೋಜನೆಯನ್ನು ಮೆ॥ ಕರ್ನಾಟಕ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ (ಕಿಯೋನಿಕ್ಸ್), ಬೆಂಗಳೂರು ಸಂಸ್ಥೆಗೆ ವಹಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ ಕಂಇ 139 ಮುನೋಮು 2009, ದಿನಾಂಕ 14.10.2009.
2) ದಿನಾಂಕ 09.11.2009ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ಇ–ಆಡಳಿತ ಕ್ರಿಯಾ ಯೋಜನೆಗಳ ಅನುಮೋದನೆಗಾಗಿ ನಡೆದ ಅಧಿಕಾರಯುತ ಸಮಿತಿ ಸಭೆಯ ನಡವಳಿಗಳು.
3) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: Comp: 11:2009-10 ದಿನಾಂಕ 18–01–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 14.10.2009 ರ ಆದೇಶದಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆಂಗಳೂರು ನಗರ ಜಿಲ್ಲೆಯ 11 ಉಪ ನೋಂದಣಿ ಕಛೇರಿಗಳಲ್ಲಿನ 1995–96 ರಿಂದ 2003–04 ನೇ ಸಾಲಿನ ಇಂಡೆಕ್ಸ್–II ರಿಜಿಸ್ಟರ್‌ಗಳಲ್ಲಿನ ನಮೂದನೆಗಳನ್ನು ಸ್ಕ್ಯಾನ್ ಹಾಗೂ ಡಾಟಾ ಎಂಟ್ರಿ ಮಾಡಿಸಲು ಮೆ॥ PWC ತಂತ್ರಜ್ಞರು ತಯಾರಿಸಿರುವ RFP (Request for proposal) ಕರಡು ಪ್ರತಿಗೆ ಅನುಮೋದನೆ ನೀಡಿದೆ. RFP ವರದಿ ಆಧರಿಸಿ ಟೆಂಡರು ಕರೆಯಬೇಕಾಗಿರುವುದರಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಪ್ರಕಾರ ಟೆಂಡರ್ ಪ್ರಕ್ರಿಯೆಯಾಗಿ ಟೆಂಡರ್ ಅಧಿಕಾರಿ/ಪ್ರಾಧಿಕಾರಗಳನ್ನು ನೇಮಕ ಮಾಡಲು ಹಾಗೂ ಟೆಂಡರ್ ಪರಿಶೀಲನಾ ಸಮಿತಿಯನ್ನು ರಚಿಸಲು ಅನುಮೋದನೆ ನೀಡಿದೆ. ಈ ಯೋಜನೆಯನ್ನು ಮೆ॥ ಸಿ–ಡಾಕ್, ಪುಣೆಯವರ ಮುಖಾಂತರ ಕಾರ್ಯಗತಗೊಳಿಸುವುದಕ್ಕೆ ಹಾಗೂ ಈ ಕುರಿತು ತಗಲುವ ರೂ. 1,15,48,609/– ಗಳ ಅಂದಾಜು ವೆಚ್ಚವನ್ನು ಮೆ॥ ಸಿ–ಡಾಕ್, ಪುಣೆಯವರಲ್ಲಿ ಜಮಾ ಇರುವ ಭಾರತ ಸರ್ಕಾರದ 11ನೇ ಆರ್ಥಿಕ ಆಯೋಗದ ಅನುದಾನದಲ್ಲಿ ಬಿಡುಗಡೆಗೊಳಿಸಲಾಗಿರುವ ರೂ.1,37,49,582/–ಗಳಿಂದ ಭರಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (2)ರ ದಿನಾಂಕ 09.11.2009ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ಇ–ಆಡಳಿತ ಕ್ರಿಯಾ ಯೋಜನೆಗಳ ಅನುಮೋದನೆಗಾಗಿ ನಡೆದ ಅಧಿಕಾರಯುತ ಸಮಿತಿ ಸಭೆಯ ನಡವಳಿಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಇ–ಆಡಳಿತ ಯೋಜನೆಗಳಲ್ಲಿ ಮೇಲೆ ಹೇಳಲಾದ ಯೋಜನೆಯೂ ಸೇರಿದಂತೆ ಇಲಾಖೆಯ ಕ್ರಿಯಾ ಯೋಜನೆಗೆ ಅಧಿಕಾರಯುತ ಸಮಿತಿಯು ಅನುಮೋದನೆ ನೀಡಿದೆ.

ಮೇಲೆ ಓದಲಾದ (3) ದಿನಾಂಕ 18.01.2010 ರ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯಲ್ಲಿ ಮಾನ್ಯ ಕಂದಾಯ ಸಚಿವರು ತಮ್ಮ ಟಿಪ್ಪಣಿ ದಿನಾಂಕ 30.12.2009 ರನ್ವಯ ಬೆಂಗಳೂರು ನಗರ ಜಿಲ್ಲೆಯ 11 ಮೂಲ ಉಪ ನೋಂದಣಿ ಕಛೇರಿಗಳಲ್ಲಿನ 1995–96 ರಿಂದ 2003–04 ರವರೆಗಿನ ಇಂಡೆಕ್ಸ್–II ಸಂಪುಟಗಳಲ್ಲಿನ ನಮೂದನೆಗಳನ್ನು ಸ್ಕ್ಯಾನ್ ಮಾಡುವುದು ಮತ್ತು ಡಾಟಾ ಎಂಟ್ರಿ ಮಾಡುವ ಯೋಜನೆಯನ್ನು ಮೆ॥ ಕಿಯೋನಿಕ್ಸ್ ಲಿಮಿಟೆಡ್, ಬೆಂಗಳೂರು ಇವರಿಗೆ ನೇರವಾಗಿ ವಹಿಸಿಕೊಡುವಂತೆ ಆದೇಶಿಸಿರುವುದರಿಂದ ಈ ವಿಷಯವನ್ನು ಇಲಾಖೆಯಲ್ಲಿ ಪರಿಶೀಲಿಸಲಾಗಿದೆ ಎಂದು, ಮೆ॥ ಕಿಯೋನಿಕ್ಸ್ ಲಿಮಿಟೆಡ್ ಕೆಟಿಪಿಪಿ ಕಾಯ್ದೆ 1999 ಕಲಂ 4(ಜಿ) ಅನ್ವಯ ವಿನಾಯಿತಿಯನ್ನು ಪಡೆಯಲಾಗಿದ್ದು, ಸರ್ಕಾರದ ಇಲಾಖೆಗಳಿಂದ ಡಾಟಾ ಎಂಟ್ರಿ ಮುಂತಾದ ಕಾರ್ಯಗಳನ್ನು ನೇರವಾಗಿ ಅವರಿಗೆ ವಹಿಸಿಕೊಡುವ ಅವಕಾಶ ನಿಯಮಾವಳಿಗಳಲ್ಲಿ ಕಲ್ಪಿಸಲಾಗಿದೆ ಎಂದು ಆದರೆ ನೇರವಾಗಿ ಈ ಕೆಲಸವನ್ನು ಮೆ॥ ಕಿಯೋನಿಕ್ಸ್ ಲಿಮಿಟೆಡ್ ಇವರಿಗೆ ವಹಿಸಬೇಕಾದಲ್ಲಿ ಸರ್ಕಾರದ ಆದೇಶ ಸಂಖ್ಯೆ ಕಂಇ 139 ಮುನೋಮು 2009, ದಿನಾಂಕ 14.10.2009 ನ್ನು ಸೂಕ್ತವಾಗಿ ಮಾರ್ಪಡಿಸಿ ಹೊಸದಾಗಿ ಆದೇಶ ಹೊರಡಿಸಬೇಕಾಗುತ್ತದೆ ಎಂದು ತಿಳಿಸಿರುತ್ತಾರೆ.

ಮೆ॥ PWC ತಂತ್ರಜ್ಞರು ಈಗಾಗಲೇ ತಯಾರಿಸಿ ಅನುಮೋದನೆ ಹೊಂದಿರುವ RFP (Request for Proposal) ಇದರಲ್ಲಿ ಅಳವಡಿಸಿರುವ ಎಲ್ಲಾ ಷರತ್ತುಗಳನ್ನು ಮೆ॥ ಕಿಯೋನಿಕ್ಸ್ ಲಿಮಿಟೆಡ್ ಇವರು ಒಪ್ಪಿಕೊಳ್ಳಬೇಕಾಗುತ್ತದೆ ಎಂದು ಸದರಿ ಷರತ್ತುಗಳಿಗೆ ಒಳಪಟ್ಟು ಈ ಬಗ್ಗೆ ಸರ್ಕಾರದ ಹಂತದಲ್ಲಿ ಪರಿಶೀಲನೆ ನಡೆಸಿ, ಈ ಯೋಜನೆಯನ್ನು ಮೆ॥ ಕಿಯೋನಿಕ್ಸ್ ಲಿಮಿಟೆಡ್, ಬೆಂಗಳೂರು ಇವರಿಗೆ ವಹಿಸಿಕೊಡುವ ಬಗ್ಗೆ ಸೂಕ್ತ ನಿರ್ಧಾರ ಕೈಗೊಳ್ಳುವಂತೆ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಕಂಇ 4 ಮುನೋಮು 2010, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆದೇಶ ಸಂಖ್ಯೆ ಕಂಇ 139 ಮುನೋಮು 2009, ದಿನಾಂಕ 14.10.2009 ರಲ್ಲಿ ಮೆ॥ ಸಿ–ಡಾಕ್ ಪುಣೆ ಇವರ ಮುಖಾಂತರ ಬೆಂಗಳೂರು ನಗರ ಜಿಲ್ಲೆಯ 11 ಮೂಲ ಉಪ ನೋಂದಣಿ ಕಛೇರಿಗಳಲ್ಲಿನ 1995–96 ರಿಂದ 2003–04 ರವರೆಗಿನ ಇಂಡೆಕ್ಸ್–II ಸಂಪುಟಗಳಲ್ಲಿನ ನಮೂದನೆಗಳನ್ನು ಸ್ಕ್ಯಾನ್ ಮಾಡುವುದು ಮತ್ತು ಡಾಟಾ ಎಂಟ್ರಿ ಮಾಡುವ ಯೋಜನೆಯನ್ನು ಕಾರ್ಯಗತಗೊಳಿಸಲು ನೀಡಿರುವ ಅನುಮತಿಯನ್ನು ರದ್ದುಪಡಿಸಿ, ಸದರಿ ಯೋಜನೆಯನ್ನು ಈ ಕೆಳಕಾಣಿಸಿದ ನಿಬಂಧನೆಗಳಿಗೆ ಒಳಪಟ್ಟು ಮೆ॥ ಕರ್ನಾಟಕ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ (ಕಿಯೋನಿಕ್ಸ್), ಬೆಂಗಳೂರು ಸಂಸ್ಥೆಗೆ ವಹಿಸಿಕೊಡಲು ತತ್ವಶಃ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

1) ಈ ಯೋಜನೆ ಬಗ್ಗೆ ಮೆ॥ PWC ತಂತ್ರಜ್ಞರು ಈಗಾಗಲೇ ತಯಾರಿಸಿರುವ ಮತ್ತು ಅನುಮೋದನೆ ಹೊಂದಿರುವ RFP (Request for Proposal) ಇದರಲ್ಲಿ ಅಳವಡಿಸಿರುವ ಎಲ್ಲಾ ಷರತ್ತುಗಳನ್ನು ಮೆ॥ ಕಿಯೋನಿಕ್ಸ್ ಸಂಸ್ಥೆಯು ಒಪ್ಪಿಕೊಳ್ಳಬೇಕಾಗಿದೆ.

2) ಈ ಯೋಜನೆಯನ್ನು ನಿರ್ವಹಿಸಲು ತಾಂತ್ರಿಕ ಪರಿಣಿತಿ (Technical competency) ಹೊಂದಿದೆ ಎಂಬುದನ್ನು ಮೆ॥ ಕಿಯೋನಿಕ್ಸ್ ಸಂಸ್ಥೆಯು ತಾಂತ್ರಿಕ ಸಲಹಾ ಸಮಿತಿ (TAC) ಯ ಮುಂದೆ ಮಂಡಿಸಬೇಕಾಗುತ್ತದೆ.

3) ಸಂಸ್ಥೆಯು ತಾಂತ್ರಿಕ ಪರಿಣಿತಿ ಹೊಂದಿರುವ ಬಗ್ಗೆ ಖಚಿತವಾದ ನಂತರ ಸ್ಪರ್ಧಾತ್ಮಕ ದರಗಳ ಬಗ್ಗೆ ತಾಂತ್ರಿಕ ತಜ್ಞರು ಮತ್ತು ಇ–ಆಡಳಿತ ಅಧಿಕಾರಿಗಳನ್ನೊಳಗೊಂಡ ಚಾಲನಾ ಸಮಿತಿ (Steering committee) ಸಭೆಯಲ್ಲಿ ಚರ್ಚಿಸಿ ಅಂತಿಮ ನಿರ್ಧಾರ ಕೈಗೊಳ್ಳಬೇಕಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.683

**(ಟಿ.ಕೆ. ರಾಮಚಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## HIGHER EDUCATION SECRETARIAT

**Sub :** Issue of terms and conditions of appointment of Prof. E.T. Puttaiah, Registrar, Mysore University, Mysore.

**Read :** 1) Government Notification No. ED 91 UMV 2009 dated 13-11-2009
2) Letter dated 21-12-2009 from Prof. E.T. Puttaiah Registrar, Mysore University, Mysore.

**Preamble:**

Prof E.T. Puttaiah, Professor, Environmental Science Department, Kuvempu University has been appointed as the Registrar, vide Government Notification dated 13-11-2009 read (1) above. The Officer has reported for duty on 16-11-2009 at Mysore University, Mysore. He requested to issue terms and conditions of his appointment vide his letter dated 16-01-2010 read (2) above. The matter has been examined. Hence the following order.

**Order No. ED 07 UNE 2010, Bangalore, Dated : 01 March 2010**

Government are pleased to issue the terms and conditions of appointment of Prof. E.T. Puttaiah Professor, Environmental Science Department Kuvempu University as the Registrar, Mysore University, Mysore are as appended to this order.

By Order and in the name of the Governor of Karnataka,

**(B.S. JAPALI)**
Deputy Secretary to Government
Higher Education Department (Universities)

**Appendix to G.O. ED 07 UNE 2010, Dated 01-03-2010**

TERMS AND CONDITIONS OF DEPUTATION OF PROF. E.T. PUTTAIAH, PROFESSOR OF ENVIRONMENTAL, SCIENCE KUVEMPU UNIVERSITY AS THE REGISTRAR, MYSORE UNIVERSITY, MYSORE.

1. **PERIOD:** The period of service of Prof. E.T. Puttaiah, Professor, Environmental Science Department Kuvempu University is for the period of three years or until further orders whichever is earlier.
2. **COMMENCEMENT AND END OF APPOINTMENT:** The appointment shall commence with effect from 16-11-2009 and ends on the date he relinquishes his office, at the end of the period or on the date of further orders whichever is earlier.
3. **PAY AND OTHER ALLOWANCES:** During the period of appointment, Prof. E.T. Puttaiah, shall be entitled to draw his own pay and grade admissible to him in his parent organization. Other allowances, such as DA/HRA/CCA as admissible under rules at the deputed place. He shall not be entitled to any other Deputation or Foreign Service allowance.
4. **LEAVE RULES:** He shall be treated as vacation prevented staff governed by the leave rules as applicable to him.
5. **LEAVE SALARY CONTRIBUTION:** The University of Mysore Mysore shall pay Leave salary contribution at the rate of 11% of pay.
6. **PENSION CONTRIBUTION:** Pension contribution shall be paid by the University of Mysore, Mysore, at the provisional rate at 12.5% on the total basic pay received during the period of deputation.
7. **MEDICAL CONCESSION:** The official shall be entitled to the medical attendance as per the Karnataka Government Servants (Medical Attendance) Rules 1963.
8. **JOINING TIME:** He shall be entitled for joining time and transfer TA as per rules.
9. He shall perform the functions of Registrar and attend to all work entrusted to him from time to time by the Vice Chancellor, Mysore University, Mysore.
10. He shall perfrom his duties diligently and he shall maintain strict secrecy in respect of official information, which he comes to know in the course of his duties.
11. He shall be liable to reimburse to Government all the losses, which the Government may sustain due to misconduct of any sort on his part.

**(B.S. JAPALI)**
Deputy Secretary to Government
Higher Education Department (Universities)

PR. 684

**ಕಾರ್ಮಿಕ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ ಕಾಇ 59, ಇಟಿಐ 2010, ಬೆಂಗಳೂರು, ದಿನಾಂಕ 6ನೇ ಮಾರ್ಚ್ 2010**

ಸರ್ಕಾರಿ ಆದೇಶ ಸಂಖ್ಯೆ ಕಾಇ 365 ಇಟಿಐ 2009 ದಿನಾಂಕ 10–11–2009 ರ ಆದೇಶ ಭಾಗದ ಕ್ರಮ ಸಂಖ್ಯೆ 1 ರಲ್ಲಿರುವ "ಅಧ್ಯಕ್ಷರು ಮೆ॥ ವಾಸವದತ್ತಾ ಸಿಮೆಂಟ್ ಕಂಪನಿ, ಸೆಡಾಮ್" ಎಂಬುದಕ್ಕೆ ಬದಲಾಗಿ "ಪ್ರಧಾನ ವ್ಯವಸ್ಥಾಪಕರು, ಮಾನವ ಸಂಪನ್ಮೂಲ ವಿಭಾಗ ಮೆ॥ ವಾಸವದತ್ತಾ ಸಿಮೆಂಟ್ ಕಂಪನಿ, ಸೇಡಂ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.685

**(ಎ.ಎಸ್. ವಿಶ್ವೇಶ್ವರಯ್ಯ)**
ಪೀಠಾಧಿಕಾರಿ
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**LABOUR SECRETARIAT**

**CORRIGENDUM**

**No. LD 59 ETI 2010, Bangalore, Dated 06 March 2010**

In the order portion of Government Order No. LD 365 ETI 2009 dated 10-11-2009, in the Serial No. 1 the words "Chairman, M/s. Vasuvadatta Cement Company, Sedam." Are read as "General Manager, HRD M/s. Vasuvadatta Cement Company, Sedam.".

By Order and in the name of the Governor of Karnataka,

PR. 685

**(Vishweshwaraiah A.S.)**
Desk Officer
Labour Department
(Employment and Training

**ಕಾರ್ಮಿಕ ಸಚಿವಾಲಯ**

**ವಿಷಯ :** 2009–10ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಯೋಜನೆಯಾದ "ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ 1396 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಉನ್ನತೀಕರಣ" ಅಡಿಯಲ್ಲಿ ಡಿಜಿಇಟಿಯಿಂದ ಅನುಮೋದನೆಯಾಗಿರುವ 22 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ ಕಾಇ 121 ಇಟಿಐ 2007 ದಿನಾಂಕ 04–03–2008
2) ಸರ್ಕಾರಿ ಆದೇಶ ಸಂಖ್ಯೆ ಕಾಇ 268 ಇಟಿಐ 2009 ದಿನಾಂಕ 16–09–2009
3) ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರ ಸಂ. ಉತಇ/ತ/ಸಿಓಇ–ಪಿಪಿಪಿ/ವಿವ–79/2009–10 ದಿನಾಂಕ 15–02–2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2007–08ನೇ ಸಾಲಿನಲ್ಲಿ ಉನ್ನತೀಕರಿಸಲಾದ 26 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸಲು ಹಾಗೂ ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರು ಕೇಂದ್ರ ಸರ್ಕಾರವು ಕಳುಹಿಸಿರುವ ಮೆಮೊರಂಡಮ್ ಆಫ್ ಅಸೋಸಿಯೇಷನ್‌ಗೆ ಸಹಿ ಮಾಡಲು ಅನುಮೋದನೆ ನೀಡಲಾಗಿದೆ. ಅಲ್ಲದೆ ಈ ಸಂಸ್ಥೆಗಳಿಗೆ ಐಎಂಸಿಯನ್ನು ರಚಿಸಲು ಹಾಗೂ ಅವುಗಳಿಗೆ ಆರ್ಥಿಕ ಹಾಗೂ ಆಡಳಿತಾತ್ಮಕ ಅಧಿಕಾರಗಳನ್ನು ಪ್ರತ್ಯಾಯೋಜಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಯೋಜನೆಯಾದ "ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ 1396 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಉನ್ನತೀಕರಣ" ಅಡಿಯಲ್ಲಿ ಡಿಜಿಇಟಿ ಯಿಂದ ಅನುಮೋದನೆಯಾಗಿರುವ 26 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರದಲ್ಲಿ ಡಿಜಿಇಟಿ ರವರು 2009–10ನೇ ಸಾಲಿಗೆ 22 ಸಂಸ್ಥೆಗಳನ್ನು ಉನ್ನತೀಕರಿಸಲು ಅನುಮೋದನೆ ನೀಡಿರುತ್ತಾರೆ ಎಂದೂ, ಅಲ್ಲದೆ ಪ್ರತಿ ಸಂಸ್ಥೆಗೆ ರೂ. 2.5 ಕೋಟಿಯಂತೆ ಬಡ್ಡರಹಿತ ಸಾಲವನ್ನು ಐ.ಎಂ.ಸಿ. ಹೆಸರಿನಲ್ಲಿ ತೆರೆಯಲಾಗಿರುವ ಬ್ಯಾಂಕ್ ಖಾತೆಗೆ ಜಮಾ ಆಗಿರುತ್ತದೆ ಎಂದು ತಿಳಿಸುತ್ತಾ, 2009–10 ಸಾಲಿನಲ್ಲಿ ಉನ್ನತೀಕರಿಸಲಾಗುತ್ತಿರುವ 22 ಸಂಸ್ಥೆಗಳಿಗೆ ಸೂಕ್ತ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ, ಕಾಇ 60 ಇಟಿಐ 2010 ಬೆಂಗಳೂರು, ದಿನಾಂಕ 09ನೇ ಮಾರ್ಚ್ 2010**

2009–10ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಯೋಜನೆಯಾದ "ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ 1396 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಉನ್ನತೀಕರಣ" ಅಡಿಯಲ್ಲಿ ಡಿಜಿಇಟಿಯಿಂದ ಅನುಮೋದನೆಯಾಗಿರುವ ಅನುಬಂಧ 1 ರಲ್ಲಿ ಸೂಚಿಸಿರುವ 22 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸಲು ಮಂಜೂರಾತಿ ನೀಡಲಾಗಿದೆ.

ಈ 22 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಐಎಂಸಿಯನ್ನು ರಚಿಸಲು ಹಾಗೂ ಇವನ್ನು ಸೊಸೈಟಿ ಕಾಯ್ದೆ ಅಡಿ ನೋಂದಾಯಿಸಲು ಮಂಜೂರಾತಿ ನೀಡಲಾಗಿದೆ. ಈ ಐಎಂಸಿಗಳಿಗೆ ಆಡಳಿತಾತ್ಮಕ ಮತ್ತು ಆರ್ಥಿಕ ಅಧಿಕಾರವನ್ನು ಸರ್ಕಾರಿ ಆದೇಶ ಸಂಖ್ಯೆ ಕಾಇ 121 ಇಟಿಐ 2007 ದಿನಾಂಕ 04–03–2008 ರಲ್ಲಿ ನೀಡಿರುವಂತೆಯೇ ಪ್ರತ್ಯಾಯೋಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
(ಎ.ಎಸ್. ವಿಶ್ವೇಶ್ವರಯ್ಯ)
ಪೀಠಾಧಿಕಾರಿ
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## Annexure to Government Order No. LD 60 ETI 2010, DT. 09-03-2010

| Sl. No. | Name of the Govt. ITI | Industry Association | Industry Partner | |
|---|---|---|---|---|
| | | **Bangalore Division Name of IMC Chairperson** | | |
| 1 | Turuvekere | CII | M/s.Gowrishankar Chemicals | Mr.T.M. Swamy<br>Managing Director<br>M/s. Gowrishankar Chemicals (P) Ltd.<br>K.B. Cross, Banasandra Road, Tiptur Taluk,<br>Tumkur District.<br>Email: swamy@gcarbon.com<br>Mobile: 9342240404 |
| | | **Mysore Division** | | |
| 2 | Alur Siddapura | CII | Askar Microns Pvt. Ltd., | Mr. K.S.Raju<br>Managing Director<br>Askar Microns Pvt. Ltd.<br>Plot No. 293-C, Hebbal Industrial Area, Mysore-570016.<br>Mob: 096111235589<br>Mr. Shanmukha 09611123522 |
| 3 | Maddur | CII | M/s. JK Tyre & Industries Ltd., | Mr. D. Ganguly,<br>Vice President (Works),<br>JK Tyre & Industries Ltd.,<br>Vikrant Plant, Mysore<br>Email: dganguly@vtp.jkmail .com |
| 4 | Paduvalahippe | CII | Askar Microns Pvt. Ltd., | Mr. K.S. Raju<br>Managing Director<br>Askar Microns Pvt. Ltd.,<br>Plot No. 293-C, Hebbal Industrial Area, Mysore-570016.<br>Mob: 09611123589<br>Mr. Shanmukha 09611123522 |
| 5 | Pandavapura | CII | M/s. Teamlease Services Pvt. Ltd. | Mr Abhishek Verna<br>Teamlease Services Pvt. Ltd.<br>Mobile Nos. : 66803070<br>Email id : abhishek@teamlease.com |
| 6 | Peradur | BCIC | M/s.Udupi Chamber of Industry and Commerce | Mr. Gujjadi Prabhakar Nayak,<br>President, M/s. Udupi Chamber of Industry and Commerce, Keralkala bettu, Udupi.<br>9845010220.<br>e-mail:gujjadinayakg@yahoo.com |

| | | | | |
|---|---|---|---|---|
| 7 | Periyapatna | CII | M/s. SILICON MICRO SYSTEMS | Mr. JAYACHANDRA ARADHYA Chief Executive SILICON MICRO SYSTEMS 106, Gandhi bazaar main road, Basavanagudi Bangalore-560 004. India Ph :+91-80-22425830/31 Mobile : 0-98440-40444 email : simsteam@vsnl.com/aradhya@simsindia.net |
| 8 | Tarikere | BCIC | M/s. Anchor Hospitality & Property Services | Mr. Ashwin Leyland, Director, M/s. Anchor Hospitality & Property Services, Bangalore. 9741500909, e-mail:ashwin.leyland@anchospitality.com |
| 9 | Udupi | BCIC | M/s. Udupi Chamber of Industry and Commerce | Mr. Gujjadi Prabhakar Nayak, President, M/s. Udupi Chamber of Industry and Commerce, Keralkala bettu, Udupi. 9845010220. e-mail:gujjadinayakg@yahoo.com |

## Belgaum Division

| | | | | |
|---|---|---|---|---|
| 10. | Babaleshwar | CII | M/s. Teamlease Services Pvt. Ltd | Mr. Abhishek Verma, Project Manager, Teamlease Services Pvt. Ltd 27, 18th main, Grape Garden 6th Block, Koramangala, Bangalore-95. Mobile Nos. : 080-66803070 E-mail id : |
| 11. | Guledagudda | CII | M/s. Manipal K 12 Education Pvt. Ltd., | Mr. Shashi K Patil President, M/s. Manipal K 12 Education Pvt. Ltd., Tech Park, PESIT Campus, 100 Ft. Ring Road, BSK III Stage, Bangalore-85. Mob: 9845034735 e-mail-shashi.patil@tutorvistacom |
| 12 | Naragunda | BCIC | M/s. Shraddha Tools & Dies | Ms. Sharanappa K Hagedal, Managing Director, M/s. Shraddha Tools & Dies, Q-24, Industrial Estate, Gokul Village, Hubli-30 2236898, 9902067934, e-mail: shraddhatd@rediffmail.com; hagedalsk@yahoo.co.in |
| 13 | Palagrama | CII | M/s. Teamlease Services Pvt. Ltd | M/s. Neeti Sharma Vice President Teamlease Services pvt. Ltd Mobile Nos. : 9900591063/9342505243 Email id : neeti@teamlease.com |
| 14 | Ramadurga | CII | M/s. Ever Onn Systems India Ltd., | Mr. Philip Christopher, General Manager, skill Development Everonn Systems India Ltd., No. 82, IV Avenue Ashok Nagar, Chennai. Email: vinodmm@everonn.com Phone:9444397381 |

| | | | | |
|---|---|---|---|---|
| 15 | Sudi | BCIC | M/s. Shraddha Tools & Dies | Mr. Sharanappa K Hagedal, Managing Director, Q-24, Industrial Estate, Gokul Village, Hubli-30., 2236898, 9902067934, e-mail: shraddhatd@rediffmail.com: hagedalsk@yahoo.co.in |
| 16. | Chincholi | CII | M/s. Manipal K 12 Education Pvt. Ltd | Mr. Shashi K Patil, President, M/s. Manipal K12 Education Pvt. Ltd., Tech Park,PESIT Campus, 100 Ft. Ring Road, BSK III Stage, Bangalore-85. Mob: 9845034735 e-mail-shashi.patil@tutorvista .com |

**Gulbarga Division**

| | | | | |
|---|---|---|---|---|
| 17 | Gangavathi | CII | M/s. Manipal K 12 Education Pvt. Ltd | Mr. Shashi K Patil, President, M/s.Manipal K 12 Education Pvt. Ltd., Tech Park, PESIT Campus, 100 Ft. Ring Road, BSK III Stage, Bangaore-85. Mob:l 9845034735 e-mail-Shashi.patil@tutorvista.com |
| 18. | Kudligi | CII | M/s. Teamlease Services Pvt. Ltd | M/s. Neeti Sharma, Vice President Teamlease Services pvt. Ltd, Koramangala, Bangalore-95. Mobile Nos. : 9900591063/9342505243 Email id : neeti@teamlease.com |
| 19. | Mudgal | FKCCI | M/s. Patil Group of Industries | Sri S.S. Patil, Chairman & MD, Patil group of Industries. |
| 20 | `Hanumasagara | CII | M/s. Silicon Micro Systems | Mr. Dhananjay. B.V. Technical Advisor, M/s. Silicon Micro Systems, 106, Annexure Bldg, Kodandarama Complex, Gandhi Bazaar Main road, Basavanagudi, Bangalore-04. |
| 21 | Mangalore Grama | BCIC | M/s. Silicon Micro Systems | Mr. Dhananjay. B.V. Technical Advisor, M/s. Silicon Micro Systems, 106, Annexure Bldg, Kodandarama Complex, Gandhi Bazaar Main road, Basavanagudi, Bangalore-04. |
| 22 | Talkal Grama | BCIC | M/s. Anand Engineering Works, | Mr. Mallikarjun S Badawadagi, Managing Director, M/s. Anand Engineering works, SM 236, M.T. Sugar Industrial Estate, Gokul Road, Hubli, 4252063, 9343400795. e-mail: anandengworks@rediffmail.com |

**(A.S. Vishweshwaraiah)**
Desk Officer
Labour Department
(Employment and Training)

PR. 686

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರದಲ್ಲಿ ವಿಶಿಷ್ಠ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳಿಗೆ 'ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ' ನೀಡಲು ಆಯ್ಕೆ ಸಮಿತಿ ರಚಿಸುವ ಬಗ್ಗೆ.

***

**ಪ್ರಸ್ತಾವನೆ:**

ರಾಜ್ಯದಲ್ಲಿ ಪರಿಸರ ಕ್ಷೇತ್ರಕ್ಕೆ ಮಹತ್ವ ನೀಡುವ ದೃಷ್ಠಿಯಿಂದ ಪರಿಸರ ಸಂರಕ್ಷಣೆಗಾಗಿ ವಿಶೇಷ ಸೇವೆ ಸಲ್ಲಿಸಿರುವ ವ್ಯಕ್ತಿ / ಸಂಸ್ಥೆಗಳಿಗೆ ಪರಿಸರ ಪ್ರಶಸ್ತಿಯನ್ನು ಸರ್ಕಾರವು ಪ್ರತಿ ವರ್ಷ ನೀಡುತ್ತಾ ಬಂದಿದೆ ಅದೇ ರೀತಿ 2009–10 ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಅರ್ಜಿಗಳನ್ನು ಆಹ್ವಾನಿಸಿ ಪತ್ರಿಕಾ ಪ್ರಕಟಣೆ ಹೊರಡಿಸಲಾಗುವುದು. ಪರಿಸರ ಸಂರಕ್ಷಣಾ ವ್ಯಕ್ತಿ / ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವುದು ಈ ಪ್ರಶಸ್ತಿಗಳ ಉದ್ದೇಶವಾಗಿದೆ. ಈ ಪ್ರಶಸ್ತಿಯು ತಲಾ ರೂ.1,00,000/–(ಒಂದು ಲಕ್ಷ ರೂ.) ಮಾತ್ರ ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ವ್ಯಕ್ತಿ ಮತ್ತು ಸಂಸ್ಥೆಗಳು (ಸರ್ಕಾರಿ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ ಟ್ರಸ್ಟ್‌ಗಳು ಇತರೆ) (1) ಪರಿಸರ ಸಂರಕ್ಷಣೆ ಮತ್ತು (2) ಪರಿಸರ ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಆರಂಭ ಶೀಲತೆ / ಕೊಡುಗೆಯಲ್ಲಿ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ಈ ಪ್ರಶಸ್ತಿಗಳನ್ನು ರಾಜ್ಯದ ಮಲೆನಾಡು, ಮತ್ತು ಕರಾವಳಿ ವಲಯ, (ಬೆಳಗಾವಿ, ಶಿವಮೊಗ್ಗ, ಚಿಕ್ಕಮಗಳೂರು, ಮೈಸೂರು, ಕೊಡಗು, ಚಾಮರಾಜನಗರ, ಹಾಸನ, ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ ಮತ್ತು ಉಡುಪಿ ಜಿಲ್ಲೆಗಳು) ದಕ್ಷಿಣ ವಲಯ (ಮಂಡ್ಯ, ರಾಮನಗರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳು) ಮತ್ತು ಉತ್ತರ ವಲಯ (ದಾವಣಗೆರೆ, ಚಿತ್ರದುರ್ಗ ಹಾವೇರಿ, ಧಾರವಾಡ, ಗದಗ್, ಬಳ್ಳಾರಿ, ಬಾಗಲಕೋಟೆ, ಬಿಜಾಪುರ, ಬೀದರ್, ಗುಲ್ಬರ್ಗ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು) ಗಳಲ್ಲಿನ ತಲಾ ಒಬ್ಬರು ವ್ಯಕ್ತಿ ಮತ್ತು ಒಂದು ಸಂಸ್ಥೆಗೆ ನೀಡಲಾಗುವುದು.

ಸರ್ಕಾರದ ಪ್ರಕಟಣೆಯಂತೆ ಸ್ವೀಕೃತವಾಗುವ ಮನವಿ, ನಾಮನಿರ್ದೇಶನಗಳನ್ನು ಪರಿಶೀಲಿಸಲು ಹಾಗೂ ಪರಿಸರ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿರುವ ವ್ಯಕ್ತಿ / ಸಂಸ್ಥೆಗಳನ್ನು ಸ್ವತಃ ಗುರುತಿಸಿ, ಪ್ರಶಸ್ತಿಗೆ ಶಿಫಾರಸ್ಸು ಮಾಡಲು ಕೆಳಕಂಡ ಅಧ್ಯಕ್ಷರು, ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

1) ಸರ್ಕಾರದ ಪ್ರಧಾನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ – ಅಧ್ಯಕ್ಷರು

2) ಸರ್ಕಾರದ ವಿಶೇಷ ಕಾರ್ಯದರ್ಶಿ
(ಪರಿಸರ ಮತ್ತು ಜೀವಿಶಾಸ್ತ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ – ಸದಸ್ಯರು

3) ಸರ್ಕಾರದ ಕಾರ್ಯದರ್ಶಿ (ಅರಣ್ಯ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ – ಸದಸ್ಯರು

4) ಅಧ್ಯಕ್ಷರು,
ಕರ್ನಾಟಕ ರಾಜ್ಯಮಾಲಿನ್ಯ ನಿಯಂತ್ರಣ ಮಂಡಳಿ – ಸದಸ್ಯರು

5) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ
ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು. – ಸದಸ್ಯರು

6) ಸದಸ್ಯ ಕಾರ್ಯದರ್ಶಿ
ಕರ್ನಾಟಕ ಜೀವ ವೈವಿಧ್ಯ ಮಂಡಳಿ, ಬೆಂಗಳೂರು. – ಸದಸ್ಯರು

7) ಮಹಾ ನಿರ್ದೇಶಕರು, ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ
ಸಂಸ್ಥೆ. ಬೆಂಗಳೂರು – ಸದಸ್ಯರು

8) ಶ್ರೀ ಅನಂತ ಹೆಗಡೆ ಆಶೀಸರ,
ಅಧ್ಯಕ್ಷರು, ಪಶ್ಚಿಮಘಟ್ಟ ಸಂರಕ್ಷಣಾ ಕಾರ್ಯಪಡೆ,
ಕೊಠಡಿ ಸಂಖ್ಯೆ: 307, 3ನೇ ಮಹಡಿ, ವಿಧಾನಸೌಧ, ಬೆಂಗಳೂರು – ಸದಸ್ಯರು

9) ಶ್ರೀ ವೈ.ಬಿ. ರಾಮಕೃಷ್ಣ
ಅಧ್ಯಕ್ಷರು, ಜೈವಿಕ ಇಂಧನ ಕಾರ್ಯಪಡೆ, ಕೊಠಡಿ ಸಂಖ್ಯೆ: 7, 1ನೇ
ಮಹಡಿ, 5ನೇ ಹಂತ, ಬಹುಮಹಡಿ ಕಟ್ಟಡ, ಬೆಂಗಳೂರು – ಸದಸ್ಯರು

10) ಹಿರಿಯ ನಿರ್ದೇಶಕರು (ತಾಂತ್ರಿಕ ಕೋಶ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ –ಸದಸ್ಯ ಕಾರ್ಯದರ್ಶಿ

ಅದರಂತೆ ಈ ಕೆಳಗಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 1 ಇಎನ್‌ಜಿ 2010 ಬೆಂಗಳೂರು, ದಿನಾಂಕ: 06/03/2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2009-10ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ ನೀಡಲು, ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆ ಸಲ್ಲಿಸಿರುವ ಒಟ್ಟು ಆರು ಅರ್ಹ ವ್ಯಕ್ತಿ ಮತ್ತು ಸಂಸ್ಥೆಗಳನ್ನು ಆಯ್ಕೆ ಮಾಡಿ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಮೇಲ್ಕಂಡಂತೆ ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯು ಸರ್ಕಾರಕ್ಕೆ ಸ್ವೀಕೃತವಾಗುವ ಮನವಿ/ನಾಮ ನಿರ್ದೇಶನಗಳನ್ನು ಪರಿಶೀಲಿಸಿ, ಶಿಫಾರಸ್ಸು ಮಾಡುವುದರ ಜೊತೆಗೆ ಅರ್ಹ ವ್ಯಕ್ತಿ/ ಸಂಸ್ಥೆಗಳನ್ನು ಗುರುತಿಸಿ, ಶಿಫಾರಸ್ಸು ಮಾಡುವ ಅಧಿಕಾರವನ್ನು ಹೊಂದಿರುತ್ತದೆ. ಈ ಸಮಿತಿಯು ಪ್ರಸಕ್ತ ಸಾಲಿಗೆ ಮಾತ್ರ ಅನ್ವಯವಾಗಿದ್ದು, ತನ್ನ ಶಿಫಾರಸ್ಸುಗಳನ್ನು ಏಪ್ರಿಲ್ 2010 ರ ತಿಂಗಳ ಅಂತ್ಯದ ಒಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**(ಬಿ. ಮನೋಹರ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 703

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಹವಾಮಾನ ವೈಪರೀತ್ಯವನ್ನು ಎದುರಿಸಲು ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳುವುದಕ್ಕಾಗಿ ಸಮನ್ವಯ ಸಮಿತಿಗೆ ಸದಸ್ಯರನ್ನು ಸೇರ್ಪಡಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಅಪಜೀ 181/ಇಎನ್‌ವಿ/2007, ದಿನಾಂಕ 20-06-2009.
(2) ದಿನಾಂಕ 25-11-2009ರ ಸಮನ್ವಯ ಸಮಿತಿಯ ಸಭೆಯ ನಡವಳಿಗಳು.
**(3) ಮುಖ್ಯಮಂತ್ರಿಯವರ ಜಂಟಿ ಕಾರ್ಯದರ್ಶಿ ಇವರ ಟಿಪ್ಪಣಿ ಸಂಖ್ಯೆ:**
ಮುಮಂ/ಅಕಾ/13/2010,ದಿನಾಂಕ 1-1-2010.

**ಪ್ರಸ್ತಾವನೆ:**

ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆಯು ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ, ರಾಜ್ಯದಲ್ಲಿ ಹವಾಮಾನ ವೈಪರೀತ್ಯವನ್ನು ಎದುರಿಸಲು ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳುವುದಕ್ಕಾಗಿ ಸಮನ್ವಯ ಸಮಿತಿಯನ್ನು ರಚಿಸಿದೆ. ಈ ಸಮನ್ವಯ ಸಮಿತಿಯು ದಿನಾಂಕ 25-11-2009 ರಂದು ನಡೆದ ಸಭೆಯಲ್ಲಿ **ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆಯು (ಇಒಆಖಿ) ರಾಜ್ಯದ ವಿವಿಧ ಇಲಾಖೆಗಳಿಂದ ಸಂಬಂಧಪಟ್ಟ ಎಲ್ಲಾ ಮಾಹಿತಿಯನ್ನು ಅನುಸರಿಸಲಾಗುತ್ತಿರುವ ಉತ್ತಮ ಆಚರಣೆಗಳನ್ನು, ಸಂಬಂಧಪಟ್ಟ ಇಲಾಖೆಗಳ ಗುರಿ ಮತ್ತು ಮುನ್ನೋಟವನ್ನು ಮತ್ತು ಹೊರಸೂಸುವಿಕೆಯನ್ನು ಕಡಿಮೆ ಮಾಡಲು ನೆರವಾಗುವುದು ಒಳಗೊಂಡಂತೆ ಹವಾಮಾನ ವೈಪರೀತ್ಯವನ್ನು ಎದುರಿಸುವಲ್ಲಿ ಅಳವಡಿಸಿಕೊಳ್ಳುತ್ತಿರುವ ಶಮನಕಾರಿ ಕ್ರಮಗಳನ್ನು ಕ್ರೋಢೀಕರಿಸಿ ನಂತರ ಹವಾಮಾನ ವೈಪರೀತ್ಯದ ಸ್ಥಿತಿಗತಿ ವರದಿಯನ್ನು ಮತ್ತು ಕರ್ನಾಟಕ ರಾಜ್ಯದ ಕ್ರಿಯಾ ಯೋಜನೆಯನ್ನು ಸಿದ್ಧಪಡಿಸುವ ಕಾರ್ಯವನ್ನು ಕೈಗೊಳ್ಳಬೇಕೆಂದು ತೀರ್ಮಾನಿಸಲಾಯಿತು.** ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ, ಕೃಷಿ ಇಲಾಖೆ, ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ, ತೋಟಗಾರಿಕಾ ಇಲಾಖೆ, ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಮತ್ತು ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಉನ್ನತ ಶಿಕ್ಷಣ) ಇವರುಗಳನ್ನು ಸಮನ್ವಯ ಸಮಿತಿಯ ಸದಸ್ಯರನ್ನಾಗಿ ಸೇರಿಸಿಕೊಳ್ಳತಕ್ಕದೆಂದು ಸಹ ನಿರ್ಧರಿಸಲಾಯಿತು. ಏತನ್ಮಧ್ಯೆ, ಮೇಲೆ (3) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಶ್ರೀ ಅನಂತ ಹೆಗ್ಡೆ ಆಶೀಸರ, ಅಧ್ಯಕ್ಷರು, ಪಶ್ಚಿಮ ಘಟ್ಟಗಳ ಕಾರ್ಯಪಡೆ ಇವರನ್ನು ಹವಾಮಾನ ವೈಪರೀತ್ಯ ಸಮನ್ವಯ ಸಮಿತಿಯ ಸದಸ್ಯರನ್ನಾಗಿ ಸೇರಿಸುವಂತೆ ಸೂಚಿಸಲಾಗಿದೆ.

ಈ ಹಿನ್ನೆಲೆಯಲ್ಲಿ ವಿಷಯವನ್ನು ಪರಾಮರ್ಷಿಸಿ, ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ, ಕೃಷಿ ಇಲಾಖೆ, ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ, ತೋಟಗಾರಿಕಾ ಇಲಾಖೆ ಪ್ರಧಾನ ಕಾರ್ಯದರ್ಶಿ/ಕಾಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಮತ್ತು ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ) ಹಾಗೂ ಶ್ರೀ ಅನಂತ ಹೆಗ್ಡೆ ಆಶೀಸರ, ಅಧ್ಯಕ್ಷರು, ಪಶ್ಚಿಮ ಘಟ್ಟಗಳ ಕಾರ್ಯಪಡೆ ಇವರುಗಳನ್ನು ಸದರಿ ಸಮಿತಿಯ ಸದಸ್ಯರನ್ನಾಗಿ ನೇಮಿಸಲು ತೀರ್ಮಾನಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 181 ಇಎನ್‌ವಿ 2007 ಬೆಂಗಳೂರು, ದಿನಾಂಕ 04-03-2010**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳ ಹಿನ್ನೆಲೆಯಲ್ಲಿ, ಮೇಲೆ(1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಧಿಸಿರುವ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು ಸರ್ಕಾರವು ಶ್ರೀ ಅನಂತ್‌ಹೆಗ್ಡೆ ಆಶೀಸರ, ಅಧ್ಯಕ್ಷರು, ಪಶ್ಚಿಮ ಘಟ್ಟಗಳ ಕಾರ್ಯಪಡೆ, ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ, ಕೃಷಿ ಇಲಾಖೆ, ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ, ತೋಟಗಾರಿಕಾ ಇಲಾಖೆ, ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಮತ್ತು ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ, ಶಿಕ್ಷಣ ಇಲಾಖೆ(ಉನ್ನತ ಶಿಕ್ಷಣ) ಇವರುಗಳನ್ನು ಹವಾಮಾನ ವೈಪರೀತ್ಯವನ್ನು

ಎದುರಿಸಲು ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳಲು ನೇಮಿಸಲಾಗಿರುವ ಸರ್ಕಾರದ ಮೇಲ್ಕಂಡ ಆದೇಶದನ್ವಯ ರಚಿಸಲಾಗಿರುವ ಸಮನ್ವಯ ಸಮಿತಿಯ ಸದಸ್ಯರನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**(ಬಿ. ಮನೋಹರ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 704

## FOREST ENVIRONMENT AND ECOLOGY SECRETARIAT

Sub: Inclusion of members to the Co-ordination Committee for ensuring effective steps to combat climate change-reg.

Read:

(1) G.O. No.FEE 181 ENV 2007 dated 20-6-2009.

(2) Proceedings of he meeting of the Co-ordination committee dated 25-11-2009.

(3) Note No. ಮುಮಂ/ಅಕಾ/13/2010, ದಿನಾಂಕ 1-1-2010 from the Joint Secretary to CM.

**Preamble:**

The Department of Forest, Ecology and Environment, Government of Karnataka had constituted a Co-Ordination Committee for ensuring effective steps to combat Climate change in the State vide G.O. read at (1) above. The Co-ordination Committee in its meeting held on 25-11-2009 had resolved that Environmental Management & Policy research Institute (EMPRI) should take up the task of consolidating all relevant information from different departments of the State, best practices being followed, mission and vision of respective departments and mitigatary measures being adopted in combating Climate change inclusive of contribution to reduce emission and then to prepare the status report on the Climate change and action plan for the State of Karnataka. It was also decided that the Principal Secretary/Secretary, Agriculture, Principal Secretary/ Secretary, Horticulture, Principal Secretary/ Secretary, Education Department (Primary and Secondary) and Principal Secretary/ Secretary, Education Department (Higher Education) be included as members of the Co-ordination Committee. In the meanwhile, It has been suggested vide the note read at (3) above to include Shri. Ananth Hegde Ashisara, Chairman Western Ghats Task Force also as member of the Co-ordination Committee on Climate Change.

After careful examination it has been decided to consider the recommendations of the Co-ordination Committee to include the Principal Secretary/Secretary, Agriculture, Principal Secretary/Secretary, Horticulture, Principal Secretary / Secretary, education Department (Primary and Secondary) and Principal Secretary/Secretary Education Department (Higher Education)and Shri. Ananth Hegde Ashisara, Chairman, Western Ghats Task Force subject to the terms and conditions laid down in the Government Order read at (1) above as member of the said Co-ordination committee.

Hence the Order.

**GOVERNMENT ORDER NO. FEE 181 ENV 2007, BANGALORE, DATED 04.03.2010**

In view of the Circumstances explained in the preamble, Government are pleased to include Shri. Ananth Hegde Ashisara (Chairman Western Ghats Task Force), the Principal Secretary /Secretary, Agriculture, Principal Secretary / Secretary, Horticulture, Principal Secretary/ Secretary, Education Department (Primary and Secondary) and Principal Secretary/ Secretary, Education Depatment (Higher Education) as members of the Co-ordination Commitee subject to the tems and conditions spelt out in the Government Order read at (1) above.

By Order and in the name of the Governor of Karnataka,

**(B.MANOHAR)**
Under Secretary to Government
Forest Environment and Ecology Department.

PR. 704

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** ಹುಣಸೂರು ವಿಭಾಗದಲ್ಲಿ ಮೆ: ಫೆನ್ಸಿಗಾರ್ಡ್ ಇಂಡಿಯಾ (ಪ್ರೈ) ಲಿಮಿಟೆಡ್, ಕೊಯಂಬತ್ತೂರು ಇವರ ವತಿಯಿಂದ Offset Electric Fence Guard ನ್ನು ಸರಬರಾಜು ಮತ್ತು ನಿರ್ಮಾಣ ಮಾಡುವ ಬಗ್ಗೆ – ಆಡಳಿತಾತ್ಮಕ ಅನುಮೋದನೆ.

**ಓದಲಾಗಿದೆ:** (1) ದಿನಾಂಕ 4–7–2009ರಂದು ನಡೆದ ಸಭಾ ನಡವಳಿ

**(2) ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಇವರ ಪತ್ರ ಸಂಖ್ಯೆ:ಎಫ್/ವಜೀ/ಸಿಆರ್–23/09–10 ದಿನಾಂಕ: 24–9–2009.**

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ:4–7–2009ರಂದು ಪ್ರಧಾನ ಕಾರ್ಯದರ್ಶಿಗಳು ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಕೊಡಗು ಮತ್ತು ಹಾಸನ ಜಿಲ್ಲೆಗಳಲ್ಲಿ ಆನೆ ಹಾವಳಿಯನ್ನು ತಡೆಗಟ್ಟಲು ಫೆನ್ಸಿಗಾರ್ಡ್ ಇಂಡಿಯಾ (ಪ್ರೈ) ಲಿಮಿಟೆಡ್ ಸಂಸ್ಥೆಯ ಸೋಲಾರ್ ಬೇಲಿಯನ್ನು ಪ್ರಾಯೋಗಿಕವಾಗಿ ಅಳವಡಿಸಲು ನಿರ್ಣಯ ತೆಗೆದುಕೊಳ್ಳಲಾಯಿತು.

2. ಮೇಲೆ (2)ರಲ್ಲಿ ಓದಲಾದ ದಿನಾಂಕ: 24–9–2009ರ ಪತ್ರದಲ್ಲಿ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಇವರು ದಿನಾಂಕ: 4–7–2009 ರಂದು ಪ್ರಧಾನ ಕಾರ್ಯದರ್ಶಿಗಳು, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯ ನಿರ್ಣಯದಂತೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹುಣಸೂರು ವಿಭಾಗ ಹಾಗೂ ಮೆ: ಫೆನ್ಸಿಗಾರ್ಡ್ ಇಂಡಿಯಾ(ಪ್ರೈ) ಲಿಮಿಟೆಡ್‌ನ ಪ್ರತಿನಿಧಿಯವರೊಂದಿಗೆ ದಿನಾಂಕ:15–7–2009 ರಂದು ದೊಡ್ಡ ಹರವೆ ಹಾಗೂ ಆನೆಚೌಕೂರು ಮೀಸಲು ಅರಣ್ಯಗಳ ವ್ಯಾಪ್ತಿಯ ಭೌಗೋಳಿಕ ಪ್ರದೇಶವನ್ನು ತಪಾಸಣೆ ಮಾಡಿದಾಗ ಸದರಿ ಪ್ರದೇಶದಲ್ಲಿ ಆನೆ ಸಂಚಾರ ಹೆಚ್ಚಾಗಿದ್ದು,ಆನೆಗಳು ತಂಡೋಪತಂಡವಾಗಿ ಪಿರಿಯಾಪಟ್ಟಣ ತಾಲ್ಲೂಕಿನ ಅರಣ್ಯ ಪ್ರದೇಶಕ್ಕೆ ಹೊಂದಿಕೊಂಡಿರುವ ಗ್ರಾಮಗಳಲ್ಲಿ ಬೆಳೆದಿರುವ ಬೆಳೆಗಳಿಗೆ ಹಾನಿ ಮಾಡುತ್ತಿರುವುದು ದಾಖಲಾತಿ, ಸ್ಥಳ ಪರಿಶೀಲನೆಯಿಂದ ಹಾಗೂ ಸ್ಥಳೀಯ ಜನರಿಂದ ಮಾಹಿತಿ ಪಡೆದು ಸದರಿ ಪ್ರದೇಶದಲ್ಲಿ Offset Electric Fence ನ್ನು ನಿರ್ಮಿಸುವುದು ಸೂಕ್ತವೆಂದು ಸ್ಥಳ ಪರಿಶೀಲನೆಯಿಂದ ಕಂಡುಬಂದಿರುವುದರಿಂದ ಮೆ: ಫೆನ್ಸಿಗಾರ್ಡ್ಇಂಡಿಯಾ (ಪ್ರೈ) ಲಿಮಿಟೆಡ್, ಕೊಯಂಬತ್ತೂರು ರವರಿಗೆ ದರ ಪಟ್ಟಿಯನ್ನುಸಲ್ಲಿಸಲು ಉಪ ಅರಣ್ಯ ಸಂರಕ್ಷಣಾಧಿಕಾರಿ, ಹುಣಸೂರು ವಿಭಾಗರವರು ಸೂಚಿಸಿರುವ ಮೇರೆಗೆ ಸದರಿ ಕಂಪನಿಯವರು 15.26 ಕಿ.ಮೀ. ರವರೆಗೆ ಸೋಲಾರ್ ಫೆನ್ಸಿಂಗ್ ಅಳವಡಿಸಬೇಕಾಗುತ್ತದೆಯೆಂದು ತಿಳಿಸಿ ಇದಕ್ಕೆ ಒಟ್ಟು ರೂ. 52.81 ಲಕ್ಷಗಳಿಗೆ ಅಂದಾಜು ಪಟ್ಟಿ ಸಲ್ಲಿಸಿರುತ್ತಾರೆಂದು ತಿಳಿಸಿ ಈಗ ಉದ್ದೇಶಿಸಿರುವ ಸೋಲಾರ್ ಫೆನ್ಸಿಂಗ್ ದರ ಪಟ್ಟಿ ಪ್ರಕಾರ ಒಂದು ಕಿ.ಮೀ.ಗೆ ರೂ. 3.463 ಲಕ್ಷಗಳು ವೆಚ್ಚವಾಗುತ್ತಿದ್ದು, ಇದು ವಿಶಿಷ್ಟ ರೀತಿಯ ಸೋಲಾರ್ ಫೆನ್ಸಿಂಗ್ ಆಗಿದ್ದು ದನಗಳು ಮತ್ತು ಜನರಿಗೆ ಅರಣ್ಯ ಪ್ರದೇಶಕ್ಕೆ ಹೋಗಲು ಯಾವುದೇ ನಿರ್ಬಂಧವಿರುವುದಿಲ್ಲವೆಂದೂ ಹಾಗೂ ಆನೆಗಳು ಕಾಡಿನಿಂದ ಹೊರಗೆ ಬರಲು ಸಾಧ್ಯವಾಗುವುದಿಲ್ಲವೆಂದೂ ತಿಳಿಸಿ ಇದನ್ನು ಪ್ರಾಯೋಗಿಕವಾಗಿ ಕೈಗೊಳ್ಳಬಹುದೆಂದು ಅಭಿಪ್ರಾಯಪಡುತ್ತಾ ಸದರಿ ಕಂಪನಿಯಿಂದ ಹತ್ತು ವರ್ಷಗಳವರೆಗೂ ನಿರ್ವಹಣೆ ಮಾಡಲು ಒಪ್ಪಂದಮಾಡಿಕೊಂಡಲ್ಲಿ ಇದರ ಉಪಯುಕ್ತತೆಯನ್ನು ನಿರ್ಧರಿಸಬಹುದೆಂಬ ಅಭಿಪ್ರಾಯದೊಂದಿಗೆ ಪ್ರಸ್ತಾವನೆಗೆ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 153 ಎಫ್ ಡಬ್ಲ್ಯೂ ಎಲ್ 2009 ಬೆಂಗಳೂರು, ದಿನಾಂಕ: 06/03/2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಹುಣಸೂರು ವಿಭಾಗದ ಪಿರಿಯಾಪಟ್ಟಣ ವಲಯದ ದೊಡ್ಡ ಹರವೆ ಮೀಸಲು ಅರಣ್ಯದಲ್ಲಿ ಮೆ: ಫೆನ್ಸಿಗಾರ್ಡ್ ಇಂಡಿಯಾ (ಪ್ರೈ) ಲಿಮಿಟೆಡ್, ಕೊಯಂಬತ್ತೂರು ಈ ಸಂಸ್ಥೆಯಿಂದ ಒಟ್ಟು 15.26 ಕಿ.ಮೀ. Offset Electric Fence Guard ನ್ನು ಪ್ರಾಯೋಗಿಕವಾಗಿ ಪ್ರತಿ ಒಂದು ಕಿ.ಮೀ. ಗೆ ರೂ. 3.463 ಲಕ್ಷಗಳಂತೆ ಒಟ್ಟು ರೂ..52.81 ಲಕ್ಷಗಳಲ್ಲಿ (ಐವತ್ತೆರಡು ಲಕ್ಷ ಎಂಭತ್ತೊಂದು ಸಾವಿರ ರೂಪಾಯಿಗಳು ಮಾತ್ರ) ನಿರ್ಮಾಣ ಮಾಡಲು ಕರ್ನಾಟಕ ಸಾರ್ವಜನಿಕ ಸಂಗ್ರಹಣಾ ಅಧಿನಿಯಮ, 1999ರ ಸೆಕ್ಷನ್ 4(ಬಿ) ರನ್ವಯ ಕ್ರಮ ಕೈಗೊಳ್ಳಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರು ಇವರು ಸದರಿ ಔಜಿಜಿಥಿಜಿಣ ಇಟಜಛಿಣಡಿಛಿ ಈಜಟಿಛಿಜ ಉಣಚಿಡಿಜ ನ ನಿರ್ವಹಣೆಯ ಬಗ್ಗೆ ಮೆ: ಫೆನ್ಸಿಗಾರ್ಡ್ ಇಂಡಿಯಾ (ಪ್ರೈ) ಲಿಮಿಟೆಡ್, ಕೊಯಂಬತ್ತೂರು ಇವರೊಂದಿಗೆ ಸೂಕ್ತ ಷರತ್ತು ಮತ್ತು ನಿಬಂಧನೆಗಳ ಕರಾರು ಪತ್ರವನ್ನು ಮಾಡಿಕೊಳ್ಳತಕ್ಕದ್ದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 57 ವೆಚ್ಚ–5/2010 ದಿನಾಂಕ: 9–2–2010 ರಲ್ಲಿ ಸಹಮತಿ ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**(ಪಿ.ಆರ್. ಕಲಾವತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 705

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ) ಶಾಖೆಯ ಮೋದಿ ಜೆರಾಕ್ಸ್ ಯಂತ್ರದ ಅರ್ಧ ವಾರ್ಷಿಕ ನಿರ್ವಹಣಾ ಗುತ್ತಿಗೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 6 ಡಿಎಸ್‌ವೈ 2009 ದಿನಾಂಕ : 19-09-2009

2. ದಿ : 23-05-2009ರ ಪತ್ರ ಸಂಖ್ಯೆ : ಕಸಂವಾಪ್ರ 113 ಸ್ವೀಮರ 2009
3. ದಿ : 20-10-2009ರ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್‌ರವರ ಬಿಲ್ ಸಂಖ್ಯೆ : 4153
4. ದಿ : 19-12-2009ರ ಸರ್ಕಾರದ ಅದೇಶ ಸಂಖ್ಯೆ : ಕಸಂವಾಪ್ರ 113 ಸ್ವೀಮರ 2009
5. ದಿ : 26-02-2010ರ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 9 ಡಿಎಸ್‌ವೈ 2009
6. ದಿ : 8-3-2010ರ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್‌ರವರ ಬಿಲ್ ಸಂಖ್ಯೆ :

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಸರ್ಕಾರದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಡಳಿತ ಕನ್ನಡ ಶಾಖೆಯಲಿರುವ ಮೋದಿ ಕಂಪನಿಯ ಜೆರಾಕ್ಸ್ ಯಂತ್ರದ ವಾರ್ಷಿಕ ಕಾರ್ಯನಿರ್ವಹಣಾ ಗುತ್ತಿಗೆಯನ್ನು ನೀಡುವ ಸಲುವಾಗಿ ದರ ಪಟ್ಟಿಯನ್ನು 03 ಕಂಪನಿಗಳಿಂದ ಕೋರಲಾಗಿತ್ತು.

ಕಾಪಿಯರ್ ಯಂತ್ರದ ವಾರ್ಷಿಕ ನಿರ್ವಹಣಾ ಗುತ್ತಿಗೆಗಾಗಿ ಈ ಕೆಳಕಂಡ ಕಂಪನಿಗಳು ದರಪಟ್ಟಿಯನ್ನು ನೀಡಿದ್ದವು. ಅದರ ವಿವರಗಳು ಈ ಕೆಳಗಿನಂತಿವೆ.

| ಕ್ರ.ಸಂ. | ಕಂಪನಿಯ ಹೆಸರು | ವಿವರ | ಒಟ್ಟು ರೂ.ಗಳಲ್ಲಿ (ಸರ್ವೀಸ್ ಟ್ಯಾಕ್ಸ್ 10.3% ಸೇರಿ) |
|---|---|---|---|
| 1 | ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ | ಎ.ಎಂ.ಸಿ. | 10,478-00 |
| 2 | ತೀರ್ಥಂಕರ್ ಎಂಟರ್ ಪ್ರೈಸಸ್ | ಎ.ಎಂ.ಸಿ. | 11,030-00 |
| 3 | ಭಾರತಿ ಎಂಟರ್ ಪ್ರೈಸಸ್ | ಎ.ಎಂ.ಸಿ. | 11,581-50 |

ಈ ಮೇಲ್ಕಂಡ ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ ಅತಿ ಕಡಿಮೆ ದರ ನೀಡಿರುವ ಬೆಂಗಳೂರಿನ ಕಾಂಪು ಗ್ರಾಫೀಕ್ಸ್ ಸಿಸ್ಟಮ್ಸ್, ನಂ. 36/3, ಆಂಜನೇಯಸ್ವಾಮಿ ದೇವಸ್ಥಾನ ರಸ್ತೆ, ಮಾರಪ್ಪ ಗಾರ್ಡನ್ ಬೆನ್‌ಸನ್ ಟೌನ್ ಪೋಸ್ಟ್, ಬೆಂಗಳೂರು-46, ರವರಿಗೆ ರೂ. 10,478/- (ಹತ್ತು ಸಾವಿರದ ನಾಲ್ಕುನೂರ ಎಪ್ಪತ್ತೆಂಟು ರೂ.ಗಳು ಮಾತ್ರ)ಗಳಿಗೆ ವಾರ್ಷಿಕ ಗುತ್ತಿಗೆ ನೀಡಲು ತೀರ್ಮಾನಿಸಿ ಸದರಿ ಕಂಪನಿಗೆ ಅರ್ಧ ವಾರ್ಷಿಕವಾಗಿ ಬಿಲ್ಲನ್ನು ಪಾವತಿಸಲಿಚ್ಛಿಸಿ, ಅರ್ಧ ವಾರ್ಷಿಕವಾಗಿ ರೂ. 5.139/- (ರೂ. ಐದು ಸಾವಿರದ ನೂರ ಮೂವತ್ತೊಂಬತ್ತು ಮಾತ್ರ)ಗಳನ್ನು ಉಲ್ಲೇಖ (4)ರ ಸರ್ಕಾರದ ಅದೇಶದಲ್ಲಿ ಪಾವತಿಸಲು ಅನುಮೋದನೆ ನೀಡಲಾಗಿತ್ತು.

ಉಲ್ಲೇಖ (5)ರ ದಿ : 26-02-2010ರ ಸರ್ಕಾರದ ಅದೇಶ ಸಂಖ್ಯೆ : ಸಿಆಸುಇ 9 ಡಿಎಸ್‌ವೈ 2009ರಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಲೇಖನ ಸಾಮಗ್ರಿ ಮತ್ತು ಬಳಕೆ ಸಾಮಗ್ರಿಗಳನ್ನು ಖರೀದಿಸುವ ಸಂಬಂಧ ಲೆಕ್ಕಶೀರ್ಷಿಕೆ 2052-00-090-0-01-051 (ಸಾಮಾನ್ಯ ವೆಚ್ಚಗಳು) (ಯೋಜನೇತರ) ಅಡಿಯಲ್ಲಿ 2009-10ನೇ ಸಾಲಿಗಾಗಿ 50,000-00 ರೂ.ಗಳನ್ನು ಹೆಚ್ಚುವರಿಯಾಗಿ ಹಂಚಿಕೆ ಮಾಡಿದ್ದು ಆ ಮೊತ್ತದಲ್ಲಿ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ಕಂಪನಿಗೆ ಬಾಕಿ ಇರುವ ಅರ್ಧ ವಾರ್ಷಿಕ ಮೊತ್ತವಾದ 5339-00 ರೂ. (ಐದುಸಾವಿರದ ಮುನ್ನೂರ ಮೂವತ್ತೊಂಬತ್ತು ರೂ.ಗಳು ಮಾತ್ರ)ಗಳನ್ನು ಪಾವತಿಸಬಹುದಾಗಿದೆ. ಆದುದರಿಂದ ಈ ಅದೇಶ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 113 ಸ್ವೀಮರ 2009, ಬೆಂಗಳೂರು, ದಿನಾಂಕ : 10ನೇ ಮಾರ್ಚ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಡಳಿತ ಕನ್ನಡ ಶಾಖೆಯಲ್ಲಿನ ಮೋದಿ ಕಂಪನಿಯ ಜೆರಾಕ್ಸ್ ಯಂತ್ರದ ವಾರ್ಷಿಕ ನಿರ್ವಹಣಾ ಗುತ್ತಿಗೆಯನ್ನು ನೀಡುವ ಸಲುವಾಗಿ 03 ಕಂಪನಿಗಳಿಂದ ದರ ಪಟ್ಟಿಯನ್ನು ಕರೆದಿದ್ದು ಅತಿ ಕಡಿಮೆ ದರ 9500-00 ರೂ.ಗಳನ್ನು ಸೂಚಿಸಿರುವ ಬೆಂಗಳೂರಿನ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ಕಂಪನಿಯ ದರ ರೂ. 9500-00 ಮತ್ತು ಶೇಕಡ 10.3 ಸರ್ವೀಸ್ ಟ್ಯಾಕ್ಸ್ ಸೇರಿ ಒಟ್ಟು ರೂ. 10,478-00 (ಹತ್ತು ಸಾವಿರ ನಾಲ್ಕು ನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ವಾರ್ಷಿಕ ಗುತ್ತಿಗೆಯನ್ನು ನೀಡಲು ಉದ್ದೇಶಿಸಿ ಈಗಾಗಲೇ ರೂ. 5139-00 (ಐದು ಸಾವಿರದ ನೂರ ಮೂವತ್ತೊಂಬತ್ತು ರೂಪಾಯಿಗಳು ಮಾತ್ರ)ಗಳನ್ನು ಅರ್ಧ

ವಾರ್ಷಿಕವಾಗಿ ಪಾವತಿಸಲಾಗಿದೆ. ಉಳಿದ ಅರ್ಧವಾರ್ಷಿಕ ನಿರ್ವಹಣಾ ಮೊತ್ತವಾದ ರೂ. 5339–00 (ಐದು ಸಾವಿರದ ಮುನ್ನೂರ ಮೂವತ್ತೊಂಬತ್ತು)ಗಳನ್ನು ಪಾವತಿಸಲು ಅನುಮೋದನೆ ನೀಡಲಾಗಿದೆ.

ಈ ವೆಚ್ಚವನ್ನು ಸರ್ಕಾರ ಅದೇಶ ಸಂಖ್ಯೆ : ಸಿಆಸುಇ 6 ಡಿಎಸ್‌ವೈ 2009, ದಿ : 26–02–2010ರ ಸರ್ಕಾರದ ಅದೇಶ ಸಂಖ್ಯೆ : ಸಿಆಸುಇ 9 ಡಿಎಸ್ ವೈ 2009 ಲೆಕ್ಕ ಶೀರ್ಷಿಕೆ 2052–00–090–0–01–051 (ಸಾಮಾನ್ಯ ವೆಚ್ಚಗಳು) (ಯೋಜನೇತರ) ಅಡಿಯಲ್ಲಿ ಭರಿಸುವುದು. ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ಕಂಪನಿಗೆ ರೂ.5,339–00 (ಐದುಸಾವಿರದ ಮುನ್ನೂರ ಮೂವತ್ತೊಂಬತ್ತು ರೂಪಾಯಿಗಳು ಮಾತ್ರ) ಗಳ ಮೊತ್ತವನ್ನು ಸಿಆಸುಇ ಲೆಕ್ಕಪತ್ರ ಶಾಖೆಯು ಡಿ.ಸಿ.ಬಿಲ್ ಮೂಲಕ ಬಿಡುಗಡೆ ಮಾಡುವುದು.

ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ (ಆಡಳಿತ ಕನ್ನಡ) ಶಾಖೆಯಲ್ಲಿರುವ ಜೆರಾಕ್ಸ್ ಯಂತ್ರದ ವಾರ್ಷಿಕ ನಿರ್ವಹಣಾ ಗುತ್ತಿಗೆಯನ್ನು ನೀಡಿರುವುದರಿಂದ ಜೆರಾಕ್ಸ್ ಯಂತ್ರವನ್ನು ಸರಿಪಡಿಸಿ ಸಿ.ಆ.ಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.711

**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

### ತಿದ್ದುಪಡಿ

ಸಂಖ್ಯೆ : ಆನಾಸ 10 ಎಫ್‌ಪಿಪಿ 2010 ಬೆಂಗಳೂರು, ದಿನಾಂಕ : 3ನೇ ಮಾರ್ಚಿ 2010

ಸರ್ಕಾರದ ಅಧಿಸೂಚನೆ ಸಂಖ್ಯೆ : ಆನಾಸ 10 ಎಫ್‌ಪಿಪಿ 2010, ದಿನಾಂಕ : 10–2–2010ರ 5ನೇ ಸಾಲಿನಲ್ಲಿನ **"ನಿಗಮ ನಿಯಮಿತದ ನಿರ್ದೇಶಕರುಗಳ ಮಂಡಳಿಯಲ್ಲಿ"** ಎಂಬುದರ ಮುಂದೆ **"ಈ ಹಿಂದೆ ನಿರ್ದೇಶಕರಾಗಿದ್ದ ಶ್ರೀ ಕೆ.ಎಸ್. ಪ್ರಭಾಕರ್, ಐ.ಎ.ಎಸ್., ರವರ ಬದಲಾಗಿ"** ಎಂದು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್.712

ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲ್ಲೂಕು, ಅರಬಕಟ್ಟೆ ಗ್ರಾಮದ ಪರಪ್ಪನ ಹೊಲದ ಹತ್ತಿರ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1) ದಿನಾಂಕ : 01–12–09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ : ಮುಸ (ದ) ತಾಂ–4/ಸಇಂ–10/ದಾವಣಗೆರೆ/ಹೊನ್ನಾಳಿ/ಅರಬಗಟ್ಟೆ /ಚೆಕ್‌ಡ್ಯಾಂ/2009/4612.
2) ಅಧ್ಯಕ್ಷರು ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದ), ಬೆಂಗಳೂರು ರವರ ದಿನಾಂಕ : 24–02–10ರ ಪತ್ರ ಸಂಖ್ಯೆ : ಮುಸದ /ಆಪ್ತ ಶಾಖೆ/ಟೆಂಡರ್/08–09/660.

**ಪ್ರಸ್ತಾವನೆ :**

ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲ್ಲೂಕು, ಅರಬಕಟ್ಟೆ ಗ್ರಾಮದ ಪರಪ್ಪನ ಹೊಲದ ಹತ್ತಿರ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿಯ 25.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಚಿತ್ರದುರ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ದಾವಣಗೆರೆ ಜಿಲ್ಲಾ ಟೆಂಡರ್ ಬುಲೆಟಿನ್ | ದಿ : 13–02–09 |
| 2 | ಪ್ರಜಾವಾಣಿ ಹಾಗೂ ಉದಯವಾಣಿ ದಿನಪತ್ರಿಕೆಗಳು | |

ಕಾರಣಾಂತರಗಳಿಂದ ಈ ಟೆಂಡರ್ ಅವಧಿಯನ್ನು ವಿಸ್ತರಿಸಿದ್ದು, ಅಂತಿಮವಾಗಿ ದಿನಾಂಕ : 14–07–2009ರಂದು ತಿದ್ದುಪಡಿ ಪ್ರಕಟಣೆ ಹೊರಡಿಸಿರುತ್ತಾರೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ ಇಬ್ಬರು ಗುತ್ತಿಗೆದಾರರು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ಗಳನ್ನು ದಿನಾಂಕ : 3–08–09 ರಂದು ತೆರೆಯಲಾಗಿದ್ದು, ಇಬ್ಬರೂ ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು, ವಿವರ ಕೆಳಕಂಡಂತಿದೆ :

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 24,99,371/– |
| ಸಿಮೆಂಟ್ ಮತ್ತು ಉಕ್ಕಿನ ಪ್ರಸಕ್ತ ಮಾರುಕಟ್ಟೆ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗೆ ಇಡಲಾದ ಪರಿಷ್ಕೃತ ಮೊತ್ತ | ರೂ. 24,33,151/– |

| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ | ಪರಿಷ್ಕೃತ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಎಸ್.ಕೆ. ನರಸಿಂಹಮೂರ್ತಿ, 1ನೇ ದರ್ಜೆ ಗುತ್ತಿಗೆದಾರರು | ರೂ. 29,37,313/– | 17.52 ಹೆಚ್ಚು | 20.72 ಹೆಚ್ಚು |
| 2 | ಜಿ.ಪಿ.ರಾಜು, 1ನೆ ದರ್ಜೆ ಗುತ್ತಿಗೆದಾರರು | 30,47,353 | 21.92 ಹೆಚ್ಚು | 25.24 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ. 1ರಲ್ಲಿರುವ ಶ್ರೀ ಎಸ್.ಕೆ. ನರಸಿಂಹಮೂರ್ತಿ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 29,37,313–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 20.72 ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (1)ರ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 30–01–10 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 24,33,151–00ಗಳ ಮೇಲೆ ಶೇಕಡ 13.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 27,49,461–00 ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಕೆ. ನರಸಿಂಹಮೂರ್ತಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಅದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 92 ಅಪಬಂ 2009, ಬೆಂಗಳೂರು, ದಿನಾಂಕ : 10ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲ್ಲೂಕು, ಅರಬಕಟ್ಟೆ ಗ್ರಾಮದ ಪರಪ್ಪನ ಹೊಲದ ಹತ್ತಿರ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 24,33,151–00 ಗಳ ಮೇಲೆ ಶೇಕಡ 13.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 27,49,461–00ಗಳಿಗೆ (ಇಪ್ಪತ್ತೇಳು ಲಕ್ಷದ ನಲವತ್ತೊಂಭತ್ತು ಸಾವಿರದ ನಾನೂರ ಅರವತ್ತೊಂದು ರೂ.ಗಳು ಮಾತ್ರ) ಶ್ರೀ ಎಸ್. ಕೆ. ನರಸಿಂಹಮೂರ್ತಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಅರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸುಧಾಕರ ಶೆಟ್ಟಿ**

ಪಿ.ಆರ್.713

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಶಿವಮೊಗ್ಗ ಜಿಲ್ಲೆ, ಹೊಸನಗರ ತಾಲ್ಲೂಕು ನಿಟ್ಟೂರು ಗ್ರಾಮ ಪಂಚಾಯತಿ ನಾಗೋಡಿ ಗ್ರಾಮದ ಸಿಡ್ಲಗುಣಿ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ಮತ್ತು ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ :**
1. ಸರ್ಕಾರದ ಅದೇಶ ಸಂಖ್ಯೆ: ಸನೀಇ 88 ಅಪಿಬಂ 2009 ದಿನಾಂಕ : 24–11–2009.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ರವರ ಪತ್ರದ ಸಂಖ್ಯೆ : ಮುಸದ/ತಾಂ.3/ಸಇಂ.8/ಶಿವಮೊಗ್ಗ/ಟೆಂಡರ್/2009–10/462 ದಿನಾಂಕ : 09–02–2010.
3. ದಿ: 02–02–2010 ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 05–03–2010ರ ಪತ್ರ ಸಂಖ್ಯೆ : ಮುಸದ/ಆಪ್ತಶಾಖೆ/ಟೆಂಡರ್/ 08–09–790

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 48.00 ಲಕ್ಷ ಅಂದಾಜು ಮೊತ್ತದ ಶಿವಮೊಗ್ಗ ಜಿಲ್ಲೆ, ಹೊಸನಗರ ತಾಲ್ಲೂಕು, ನಿಟ್ಟೂರು ಗ್ರಾಮ ಪಂಚಾಯತಿ ನಾಗೋಡಿ ಗ್ರಾಮದ ಸಿಡ್ಲಗುಣಿ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ಮತ್ತು ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಗಿರಿಜನ ಉಪ ಯೋಜನೆ ಶೀರ್ಷಿಕೆಯಡಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ರವರು ನೋಂದಣಿ ಸಂಖ್ಯೆ 36/2009–10ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಪದ್ಧತಿಯಲ್ಲಿ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | ದಿ : 28–02–2009 |
| ವಿಜಯ ಕರ್ನಾಟಕ ದಿನ ಪತ್ರಿಕೆ (ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ) | ದಿನಾಂಕ : 20–01–2010 |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ 11 ಜನ ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂ ಪಡೆದಿದ್ದು ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇವರ ಟೆಂಡರನ್ನು ದಿನಾಂಕ : 28–01–2010 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 46,93,332/– |
| ಸಿಮೆಂಟ್ ಮತ್ತು ಉಕ್ಕಿನ ಪ್ರಸಕ್ತ ಮಾರುಕಟ್ಟೆ ದರಗಳನ್ನು ಪರಿಗಣಿಸಿದಂತೆ ಪರೀಷ್ಕೃತ ಟೆಂಡರ್‌ಗೆ ಇಡಲಾದ ಮೊತ್ತ | ರೂ. 47,29,095/– |

| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ | ಪರಿಷ್ಕೃತ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ವಸಂತ ಆರ್ ಹೆಗ್ಡೆ, 1ನೇ ದರ್ಜೆ ಗುತ್ತಿಗೆದಾರರು | ರೂ. 54,99,056/– | 17.17 ಹೆಚ್ಚು | 16.28 ಹೆಚ್ಚು |
| 2 | ಎಸ್. ದೇವರಾಜ್, 1ನೆ ದರ್ಜೆ ಗುತ್ತಿಗೆದಾರರು | 60,60,227/– | 29.12 ಹೆಚ್ಚು | 28.15 ಹೆಚ್ಚು |

ಮೇಲ್ಕಂಡಂತೆ ಅತ್ಯಂತ ಕಡಿಮೆ ದರಗಳನ್ನು ನಮೂದಿಸಿರುವ ಶ್ರೀ ವಸಂತ ಆರ್. ಹೆಗ್ಡೆ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ. 54,99,056/–ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 16.28 ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 10–02–2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 47,29,095/–ಗಳ ಮೇಲೆ ಶೇಕಡ 12ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 52,96,586/– ಗಳಿಗೆ ಕಾಮಗಾರಿಯನ್ನು ಶ್ರೀ ವಸಂತ ಆರ್. ಹೆಗ್ಡೆ, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಅದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 06 ಅಪಿಬಂ 2010, ಬೆಂಗಳೂರು, ದಿನಾಂಕ : 10ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಹೊಸನಗರ ತಾಲ್ಲೂಕು, ನಿಟ್ಟೂರು ಗ್ರಾಮ ಪಂಚಾಯತಿ ನಾಗೋಡಿ ಗ್ರಾಮದ ಸಿಡ್ಲಗುಣಿ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ಮತ್ತು ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 47,29,095/– ಗಳ ಮೇಲೆ ಶೇಕಡ 12 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 52,96,586/–ಗಳಿಗೆ (ಐವತ್ತೆರಡು ಲಕ್ಷ ತೊಂಬತ್ತಾರು ಸಾವಿರದ ಐದುನೂರ ಎಂಬತ್ತಾರು ರೂ.ಗಳು ಮಾತ್ರ) ಶ್ರೀ ವಸಂತ ಆರ್. ಹೆಗ್ಡೆ, 1ನೇ ದರ್ಜೆ ಗುತ್ತಿಗೆದಾರರು. ಇವರಿಗೆ ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

